# ಕಲಿಯುಗ ಸಾರಿದ ಪರಂಜ್ಯೋತಿ ಶ್ರೀ ಮಂಟೇಸ್ವಾಮಿ












ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಜನಪದ ಮಹಾಕಾವ್ಯಗಳ ಸಂಗ್ರಹ ಸಂಪಾದನೆಯಲ್ಲಿ ಎರಡು ಮಾದರಿಗಳು ರೂಢಿಗತವಾಗಿವೆ. ಒಂದು, ಪ್ರಾಚೀನ ಕೃತಿಗಳ ಗ್ರಂಥ ಸಂಪಾದನೆಯ ಕ್ರಮ. ಇನ್ನೊಂದು ಒಬ್ಬ ಕಲಾವಿದ ಅಥವಾ ಕಲಾತಂಡ ಹಾಡಿದ ಮಹಾಕಾವ್ಯವನ್ನು ಲಿಪ್ಯಂತರ ಮಾಡಿ ಪ್ರಕಟಿಸುವುದು. ಈ ಎರಡೂ ಕ್ರಮಗಳಲ್ಲಿರುವ ತೊಡಕುಗಳನ್ನು ಗಂಭೀರವಾಗಿ ಅಭ್ಯಾಸ ಮಾಡಿ ಓದಿಗೆ ಸುಲಲಿತವಾಗುವ ಮಾದರಿಯೊಂದನ್ನು ಸೃಷ್ಟಿಸಿದ ಕೀರ್ತಿ ಈ ಕೃತಿಯ ಸಂಪಾದಕರಿಗೆ ಸಲ್ಲುತ್ತದೆ.

ಮೊದಲ ಘಟ್ಟದ ಜನಪದ ಮಹಾಕಾವ್ಯ ಸಂಪಾದನಾಕಾರರು ಶಿಷ್ಟ ಮಹಾಕಾವ್ಯಗಳ ಬೃಹತ್ ಪಠ್ಯಕಲ್ಪನೆಯಲ್ಲಿ ಮೌಖಿಕ ಕಾವ್ಯಗಳಿಗೂ ಅನ್ವಯಿಸಿಕೊಂಡು ಸಂಗ್ರಹ ಸಂಪಾದನೆಗಳನ್ನು ಮಾಡಿದ್ದಾರೆ. ಇದರಿಂದ ಜನಪದ ಮಹಾಕಾವ್ಯಗಳು ನಿರೀಕ್ಷಿಸಿದ ಮಟ್ಟದಲ್ಲಿ ಓದುಗರನ್ನು ತಲುಪಿಲ್ಲ ಎಂದು ಈ ಪಠ್ಯದ ಸಂಪಾದನಾಕಾರರು ಸರಿಯಾಗಿ ಗುರುತಿಸಿದ್ದಾರೆ. ಕನ್ನಡ ಪ್ರಾಚೀನ ಮಹಾಕಾವ್ಯಗಳ ಸಂಗ್ರಹ ಸಂಪಾದನೆಗಳು ಬಂದ ಹಾಗೆ ಮೌಖಿಕ ಮಹಾಕಾವ್ಯಗಳ 'ಓದುಪಠ್ಯ' ಕ್ರಮ ಈ ಕೃತಿಯಿಂದ ಆರಂಭವಾಗಿದೆ. ಆದ್ದರಿಂದ ಈ ಕೃತಿ ಸಂಪಾದಕರಾದ ಡಾ. ವೆಂಕಟೇಶ ಇಂದ್ವಾಡಿ ಅವರಿಗೆ ಕನ್ನಡ ವಿಶ್ವವಿದ್ಯಾಲಯದ ... ವೆ.

ಡಾ. ಎ. ಮುರಿಗೆಪ್ಪ
ಕುಲಪತಿ




ISBN 978-93-81645-58-1

ಕನ್ನಡ ಭಾಷಾಭಿವೃದ್ಧಿ ಯೋಜನೆ

# ಮಂಟೇಸ್ವಾಮಿ ಕಾವ್ಯ

## ಓದುಪಠ್ಯ



ಸಂಪಾದಕ
ಡಾ. ವೆಂಕಟೇಶ ಇಂದ್ವಾಡಿ

ಕನ್ನಡ ಭಾಷಾಭಿವೃದ್ಧಿ ಯೋಜನೆ ೬

# ಮಂಟೇಸ್ವಾಮಿ ಕಾವ್ಯ

## (ಓದುಪಠ್ಯ)

ಸಂಪಾದಕ

**ಡಾ. ವೆಂಕಟೇಶ ಇಂದ್ವಾಡಿ**



ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

**MANTESWAMY KAAVYA**
Edit by
**Venkatesh Indawadi**
Associate Professor
Department of Kannada Literature Studies
Kannada University, Hampi
Vidyaranya 583 276

Published by
**Dr. A. Subbanna Rai**
Director, Prasaranga
Kannada University, Hampi
Vidyaranya 583 276

First Impression: 2012

www.kannadauniversity.org

Pages: 30 + 134 **Price: ₹ 120/-**

**ISBN 978-93-81645-58-1**



**ಬೆಲೆ: ₹ ೧೨೦/-**

ಅಕ್ಷರ ಸಂಯೋಜನೆ
**ವಿದ್ಯಾರಣ್ಯ ಗಣಕ ಕೇಂದ್ರ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಮುಖಪುಟ: **ಕೆ.ಕೆ. ಮಕಾಳಿ**

ಪುಸ್ತಕ ದೊರೆಯುವ ಸ್ಥಳ
**ಸರಸ್ವತಿ ಪುಸ್ತಕ ಮಾರಾಟ ಮಳಿಗೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
ದೂರವಾಣಿ : ೦೮೩೯೪-೨೪೧೩೧೩

**ಕನ್ನಡ ವಿಶ್ವವಿದ್ಯಾಲಯ ಪ್ರಾದೇಶಿಕ ಕಚೇರಿ**
ನಂ. ೧, ಕಾನೂನು ಕಾಲೇಜಿನ ಹಳೆಯ ಕಟ್ಟಡ
ಮೈಸೂರು ಬ್ಯಾಂಕ್ ವೃತ್ತ, ಅರಮನೆ ರಸ್ತೆ
**ಬೆಂಗಳೂರು ೫೬೦ ೦೦೯**
ದೂರವಾಣಿ: ೦೮೦-೨೨೩೭೨೩೮೮

ಮುದ್ರಣ
**ಶುಭೋದಯ ಪ್ರಿಂಟರ್ಸ್, ಬೆಂಗಳೂರು**

ಡಿ.ವಿ. ಸದಾನಂದ ಗೌಡ
ಮುಖ್ಯಮಂತ್ರಿ



ಕರ್ನಾಟಕ ಸರ್ಕಾರ

ವಿಧಾನಸೌಧ
ಬೆಂಗಳೂರು ೫೬೦ ೦೦೧

# ಶುಭ ಹಾರೈಕೆ

ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗವು ಕನ್ನಡ ಭಾಷಾಭಿವೃದ್ಧಿ ಯೋಜನೆಯಡಿಯಲ್ಲಿ 'ಮಂಟೇಸ್ವಾಮಿ ಕಾವ್ಯ' (ಓದುಪಠ್ಯ) ಪುಸ್ತಕವನ್ನು ಪ್ರಕಟಿಸುತ್ತಿರುವುದು ಔಚಿತ್ಯಪೂರ್ಣ.

ನಮ್ಮ ಸರ್ಕಾರದ ಪ್ರಯತ್ನದ ಫಲವಾಗಿ ಕನ್ನಡಕ್ಕೆ ಶಾಸ್ತ್ರೀಯ ಭಾಷೆ ಸ್ಥಾನ ದೊರೆತಿದ್ದು, ಈ ಹಿನ್ನೆಲೆಯಲ್ಲಿ ಕನ್ನಡ ಭಾಷಾಭಿವೃದ್ಧಿ ಯೋಜನೆ ಕಾರ್ಯಕ್ರಮಗಳಿಗೆ ನಮ್ಮ ಸರ್ಕಾರ ವಿಶೇಷ ಅನುದಾನವಾಗಿ ರಾಜ್ಯದ ಎಲ್ಲಾ ವಿಶ್ವವಿದ್ಯಾನಿಲಯಗಳಿಗೆ ತಲಾ ೨ ಕೋಟಿ ರೂಪಾಯಿಗಳನ್ನು ಮೀಸಲಿಟ್ಟು, ಈಗಾಗಲೇ ಒಂದು ಕೋಟಿ ರೂ. ಬಿಡುಗಡೆ ಮಾಡಲಾಗಿದೆ. ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ಮತ್ತು ನಾಡಿನ ವಿಶ್ವವಿದ್ಯಾನಿಲಯಗಳ ಕನ್ನಡ ವಿಭಾಗಗಳು ಈ ಕಾರ್ಯಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಕಾರ್ಯತತ್ಪರರಾಗಿರುವುದು ಮೆಚ್ಚತಕ್ಕ ಸಂಗತಿ.

ಕನ್ನಡ ಭಾಷೆಗೆ ಎರಡು ಸಾವಿರ ವರ್ಷಗಳ ಸುದೀರ್ಘ ಇತಿಹಾಸವಿದೆ. ಸಮೃದ್ಧವೂ ಪ್ರಬುದ್ಧವೂ ಆದ ಕನ್ನಡ ನಾಡು ತನ್ನ ಭಾಷಿಕ, ಸಾಂಸ್ಕೃತಿಕ, ಸಾಹಿತ್ಯಕ ಅನನ್ಯತೆಯಿಂದ ಜಾಗತಿಕ ಮಟ್ಟದಲ್ಲಿ ಗುರುತಿಸಿಕೊಂಡಿದೆ. ಈ ಬೆಳವಣಿಗೆಗೆ ಕನ್ನಡದ ಅಸಂಖ್ಯಾತ ಕವಿಗಳೂ, ಲೇಖಕರೂ, ಕಲಾವಿದರೂ ಕಾರಣವಾಗಿದ್ದಾರೆ. ಕನ್ನಡ ಭಾಷೆ ಸೃಜನಶೀಲವಾಗಿ ಮತ್ತು ಶಾಸ್ತ್ರೀಯವಾಗಿ ಶ್ರೇಷ್ಠಮಟ್ಟದ ಬೆಳವಣಿಗೆಯನ್ನು ಹೊಂದಿದೆ. ವೈವಿಧ್ಯ ಪೂರ್ಣವಾದ ಒಂದು ದೊಡ್ಡ ಪರಂಪರೆ ನಮ್ಮ ಹಿಂದಿದೆ. ಈ ಮಹಾಪರಂಪರೆಯ ಮುಂಚೂಣಿಯಲ್ಲಿ ನಾವಿದ್ದೇವೆ. ಕನ್ನಡವನ್ನು ಇನ್ನೂ ಎತ್ತರಕ್ಕೆ ತೆಗೆದುಕೊಂಡು ಹೋಗುವ ಬಹುಮುಖ್ಯ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ. ಕನ್ನಡ ಕಟ್ಟುವ ಈ ಮಹತ್ವದ ಕೈಂಕರ್ಯಕ್ಕೆ ಎಲ್ಲರೂ ಕೈಜೋಡಿಸಬೇಕಾಗಿದೆ.

ಡಿ.ವಿ. ಸದಾನಂದ ಗೌಡ

ಗೋವಿಂದ ಎಂ. ಕಾರಜೋಳ
ಸಣ್ಣ ನೀರಾವರಿ,
ಕನ್ನಡ ಮತ್ತು ಸಂಸ್ಕೃತಿ ಸಚಿವರು


ಕರ್ನಾಟಕ ಸರ್ಕಾರ

ನಂ.೩೩೦, ೩ನೇ ಮಹಡಿ,
ವಿಧಾನಸೌಧ
ಬೆಂಗಳೂರು ೫೬೦ ೦೦೧

# ಶುಭಾಕಾಂಕ್ಷೆ

ಕನ್ನಡ ನಾಡು-ನುಡಿಗೆ ಸುದೀರ್ಘವಾದ ಇತಿಹಾಸವಿದೆ. ಭಾರತೀಯ ಭಾಷೆಗಳಲ್ಲಿಯೇ ಅತಿ ಹೆಚ್ಚು ಜ್ಞಾನಪೀಠ ಪ್ರಶಸ್ತಿಗಳನ್ನು ಪಡೆದಿರುವ ಹೆಗ್ಗಳಿಕೆಗೆ ನಮ್ಮ ಭಾಷೆ ಪಾತ್ರವಾಗಿದೆ.

ಇಂಥ ಅಪೂರ್ವ ಪರಂಪರೆಯನ್ನು ಹೊಂದಿರುವ ಕನ್ನಡ ಭಾಷೆಯನ್ನು ಕೇಂದ್ರ ಸರ್ಕಾರ ಶಾಸ್ತ್ರೀಯ ಭಾಷೆ ಎಂದು ಘೋಷಿಸಿದೆ. ಈ ಸಂದರ್ಭದಲ್ಲಿ ಕನ್ನಡದ ಕೆಲಸಕ್ಕೆ ಕೈಜೋಡಿಸಿರುವ ಕರ್ನಾಟಕದ ರಾಜ್ಯ ಸರ್ಕಾರ 'ಕನ್ನಡ ಭಾಷಾಭಿವೃದ್ಧಿ ಯೋಜನೆ'ಗೆ ವಿಶೇಷ ಅನುದಾನ ಬಿಡುಗಡೆ ಮಾಡಿದೆ. ಇತಿಹಾಸ, ಭಾಷೆ, ಸಾಹಿತ್ಯ, ಪರಂಪರೆ, ಜಾನಪದ, ವಿಜ್ಞಾನ, ಮಾನವಿಕ ಇನ್ನಿತರ ಅಂಶಗಳನ್ನು ಕುರಿತ ಹೊತ್ತಗೆಗಳು ಸಿದ್ಧವಾಗುತ್ತಿವೆ. ಈ ಯೋಜನೆ ಯಡಿಯಲ್ಲಿ ಕನ್ನಡ ವಿಶ್ವವಿದ್ಯಾಲಯವು ವಿವಿಧ ವಿಭಾಗಗಳ ಅಧ್ಯಾಪಕರಿಂದ ಪುಸ್ತಕಗಳನ್ನು ಬರೆಯಿಸಿ ಹೊರತರುವ ಕಾರ್ಯವನ್ನು ಹಮ್ಮಿ ಕೊಂಡಿರುತ್ತದೆ.

ರಾಜ್ಯ ಸರ್ಕಾರದ ಈ ಯೋಜನೆ ಕನ್ನಡ ನಾಡು-ನುಡಿ ಸಂಸ್ಕೃತಿಯ ಪುನರುತ್ಥಾನಕ್ಕೆ ಕಾರಣವಾಗಿದೆ. ಈ ಮೂಲಕ ವಿವಿಧ ಜ್ಞಾನಶಿಸ್ತುಗಳಲ್ಲಿ ಕನ್ನಡಿಗರ ಅಧ್ಯಯನಾಸಕ್ತಿ ಬೆಳೆಯಲು ಸಹಕಾರಿಯಾಗಿವೆ.

ನಾಡು-ನುಡಿಯ ಅಭಿವೃದ್ಧಿ ವಿಚಾರದಲ್ಲಿ ಸರ್ಕಾರ ಸದಾ ಸಹಕಾರ ನೀಡುವುದು. ಕನ್ನಡಿಗರಿಗೆ ಒಳಿತಾಗಲಿ. ಸರ್ವರೂ ಸುಖ ಶಾಂತಿಯಿಂದ ಬದುಕಿ ಬಾಳಲೆಂದು ಹೃದಯತುಂಬಿ ಹಾರೈಸುವೆ.

**ಗೋವಿಂದ ಎಂ. ಕಾರಜೋಳ**

ಬಸವರಾಜು ಭಾ.ಆ.ಸೇ.
ಸರ್ಕಾರದ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ ಹಾಗೂ
ವಾರ್ತಾ ಇಲಾಖೆ



ಕರ್ನಾಟಕ ಸರ್ಕಾರ

ಕೊಠಡಿ ಸಂಖ್ಯೆ ೨,
ನೆಲಮಹಡಿ, ವಿಕಾಸಸೌಧ
ಬೆಂಗಳೂರು ೫೬೦ ೦೦೧

# ಶುಭ ಸಂದೇಶ

ದ್ರಾವಿಡ ಭಾಷಾ ಪರಂಪರೆಯ ನಡುವೆ ಕನ್ನಡ ಭಾಷೆಯ ಸಾಂಸ್ಕೃತಿಕ ವೈವಿಧ್ಯ ಎದ್ದು ಕಾಣುವಂತಿದೆ. ತಮಿಳು ಭಾಷೆಯ ಪರಂಪರೆಗೆ ಸರಿಸಮಾನವಾಗಿಯೇ ಬೆಳೆದು ಬಂದಿರುವ ಕನ್ನಡಕ್ಕೆ ನಿಖರವಾಗಿಯೇ ಒಂದೂವರೆ ಸಾವಿರ ವರ್ಷಗಳಿಗೂ ಮೀರಿದ ಇತಿಹಾಸವಿದೆ. ಕ್ರಿ.ಶ. ೪೫೦ರ ಹಲ್ಮಿಡಿ ಶಾಸನದ ಕಾಲಕ್ಕೆ ಕನ್ನಡ ಕರ್ನಾಟಕದಲ್ಲಿ ಬಳಕೆಯಲ್ಲಿತ್ತು. ಭಾರತದ ಇತಿಹಾಸಕ್ಕೆ ತನ್ನದೇ ಕಾಣಿಕೆ ನೀಡಿದ ಕರ್ನಾಟಕದ ಸಾಂಸ್ಕೃತಿಕ ಪರಂಪರೆಯನ್ನು ಪರಿಗಣಿಸಿ ಭಾರತ ಸರ್ಕಾರ ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನ ಮಾನವನ್ನು ನೀಡಿರುವುದು ಎಲ್ಲಾ ರೀತಿಯಿಂದಲೂ ಸಮಂಜಸ ಹಾಗೂ ಸೂಕ್ತ ಎಂದೆ ನಿಸುತ್ತದೆ. ೨೦೦೮ರಲ್ಲಿ ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ದೊರೆತ ಸಂದರ್ಭದಲ್ಲಿ ಕರ್ನಾಟಕದ ಮಾನ್ಯ ಮುಖ್ಯಮಂತ್ರಿಗಳಾಗಿ **ಶ್ರೀ ಬಿ.ಎಸ್. ಯಡಿಯೂರಪ್ಪ** ಅವರು ಕರ್ನಾಟಕದ ಎಲ್ಲ ವಿಶ್ವವಿದ್ಯಾನಿಲಯಗಳ ಕನ್ನಡ ವಿಭಾಗಗಳಿಗೂ ಎರಡೆರಡು ಕೋಟಿ ಅನುದಾನವನ್ನು ಬಿಡುಗಡೆ ಮಾಡಿದ್ದಾರೆ. ಅದರಂತೆ ಕರ್ನಾಟಕದ ವಿವಿಧ ಭಾಗದ ವಿಶ್ವವಿದ್ಯಾನಿಲಯಗಳ ಕನ್ನಡ ವಿಭಾಗಗಳು ಕನ್ನಡ ಸಾಹಿತ್ಯ ಪರಂಪರೆಯನ್ನು ಕುರಿತಾಗಿ ಅನೇಕ ಸಂಶೋಧನಾ ಯೋಜನೆಗಳನ್ನು ಕೈಗೆತ್ತಿಕೊಂಡಿರುತ್ತವೆ. ಈ ಹಿನ್ನೆಲೆಯಲ್ಲಿ ಕನ್ನಡ ವಿಶ್ವವಿದ್ಯಾಲಯವು ಕಾಲೇಜು ವಿದ್ಯಾರ್ಥಿಗಳ ಮತ್ತು ಸಾಮಾನ್ಯ ಓದುಗರನ್ನು ಗಮನದಲ್ಲಿಟ್ಟುಕೊಂಡು ಶಾಸ್ತ್ರೀಯ ಭಾಷಾ ಯೋಜನೆಯನ್ನು ಹಮ್ಮಿಕೊಂಡಿದೆ. ಆ ನಿಟ್ಟಿನಲ್ಲಿ ಕನ್ನಡ ವಿಶ್ವವಿದ್ಯಾಲಯ ಭಾಷೆ, ಸಾಹಿತ್ಯಕ್ಕೆ ಹಾಗೂ ಸಂಸ್ಕೃತಿಗೆ ಸಂಬಂಧ ಪಟ್ಟಂತೆ ಅನೇಕಾನೇಕ ವಿಷಯಗಳ ಸಂಶೋಧನಾತ್ಮಕ ಪುಸ್ತಕಗಳನ್ನು ಪ್ರಕಟಿಸುತ್ತಿದೆ. ಇಂಥದೊಂದು ಉಪಯುಕ್ತ ಯೋಜನೆಯನ್ನು ಕೈಗೆತ್ತಿಕೊಂಡು ಉತ್ಸಾಹದಿಂದ ಮುಂದುವರೆಸುತ್ತಿರುವ ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಡಾ. ಎ. ಮುರಿಗೆಪ್ಪ ಮತ್ತು ಕುಲಸಚಿವ ಡಾ. ಮಂಜುನಾಥ ಬೇವಿನಕಟ್ಟಿ ಅವರನ್ನು, ಪ್ರಸಾರಾಂಗದ ನಿರ್ದೇಶಕರಾದ ಡಾ. ಎ. ಸುಬ್ಬಣ್ಣ ರೈ ಹಾಗೂ ಈ ಪುಸ್ತಕದ ಸಂಪಾದಕರಾದ ಡಾ. ವೆಂಕಟೇಶ ಇಂದ್ವಾಡಿ ಅವರನ್ನೂ ನಾನು ಕರ್ನಾಟಕ ಸರ್ಕಾರದ ಪರವಾಗಿ ಅಭಿನಂದಿಸುತ್ತೇನೆ.

ಬಸವರಾಜು

ಡಾ. ಮನುಬಳಿಗಾರ್
ಆಯುಕ್ತರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ


ಕರ್ನಾಟಕ ಸರ್ಕಾರ

ಕನ್ನಡ ಭವನ
ಜೆ.ಸಿ. ರಸ್ತೆ
ಬೆಂಗಳೂರು ೫೬೦ ೦೦೨

# ನಲ್ನುಡಿ

ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಪರಂಪರೆಯೇ ಕುತೂಹಲಕರ ಮತ್ತು ವೈವಿಧ್ಯಮಯ ವಾದುದು. ಹತ್ತನೆಯ ಶತಮಾನ ಮತ್ತು ಅದರ ಪೂರ್ವಯುಗವನ್ನು ವೀರಯುಗ ಎಂದು ಕರೆಯಲಾಗಿದೆ. ಪಂಪ ಬರೆದದ್ದು 'ವಿಕ್ರಮಾರ್ಜುನವಿಜಯ'ವಾದರೆ ರನ್ನ ಬರೆದದ್ದು 'ಸಾಹಸ ಭೀಮವಿಜಯ'. ಇದೆಲ್ಲಕ್ಕಿಂತ ಪೂರ್ವದಲ್ಲಿ ಕವಿರಾಜಮಾರ್ಗ ಕಾರನು ಕನ್ನಡ ನಾಡಿನ ಜನಗಳನ್ನು ಕಲಿಗಳೆಂದೂ, ಕವಿಗಳೆಂದೂ ಮುಕ್ತಕಂಠದಿಂದ ಪ್ರಶಂಸಿಸುತ್ತಾನೆ. ಅದುವರೆಗೆ ಅರಮನೆಯಲ್ಲಿ ಬೆಳೆದ ಸಾಹಿತ್ಯ ಹನ್ನೆರಡನೆಯ ಶತಮಾನದ ವೇಳೆಗೆ ಸಾಮಾನ್ಯರ ನಡುವೆ ಬಂದು ಚಳವಳಿಯ ರೂಪ ಪಡೆದುಕೊಂಡಿತು. ದಾಸ ವರೇಣ್ಯರ ಕಾಲಕ್ಕೆ ಕನ್ನಡ ಸಾಹಿತ್ಯವು ಜನಸಮೂಹದ ಅಂತರಂಗವನ್ನು ರಾಗ, ತಾಳಗಳ ಮುಖೇನ ಕಾಂತಾಸಮ್ಮಿತ ಭಾವದ ಮೂಲಕವೇ ಮುಟ್ಟತೊಡಗಿತು. ಆಧುನಿಕ ಬರಹಗಾರರ ಪ್ರತಿಭಾನ್ವಿತ ಬರವಣಿಗೆಯಂತೂ ಸಮಸ್ತ ಕನ್ನಡಿಗರ ಅರಿವಿಗೆ ಬಂದಿರುವಂಥದ್ದೇ. ಹೀಗೆ ಒಂದೂವರೆ ಸಾವಿರ ವರ್ಷಗಳ ಸ್ಪಷ್ಟ ಮತ್ತು ಸಮಗ್ರ ಇತಿಹಾಸ ವಿರುವ ಕನ್ನಡ ಭಾಷಾ ಶ್ರೀಮಂತಿಕೆಗೆ ೨೦೦೮ರಲ್ಲಿ ಭಾರತ ಸರ್ಕಾರ ಶಾಸ್ತ್ರೀಯ ಸ್ಥಾನಮಾನ ನೀಡಿತು. ಈ ಸಂದರ್ಭದಲ್ಲಿ ಕರ್ನಾಟಕ ಸರ್ಕಾರವೂ ಕೂಡ ಕನ್ನಡನಾಡಿನ ಎಲ್ಲ ವಿಶ್ವವಿದ್ಯಾನಿಲಯಗಳ ಕನ್ನಡ ವಿಭಾಗಗಳಿಗೆ ತಲಾ ಎರಡು ಕೋಟಿ ರೂಪಾಯಿಗಳ ಅನುದಾನವನ್ನು ಬಿಡುಗಡೆ ಮಾಡಿತು. ಈಗ ಎಲ್ಲ ವಿಶ್ವವಿದ್ಯಾನಿಲಯ ಗಳು ಕನ್ನಡ ಸಾಹಿತ್ಯ, ಸಂಸ್ಕೃತಿ ಕುರಿತು ಸಂಶೋಧನೆಯ ಯೋಜನೆಗಳಲ್ಲಿ ತೊಡಗಿಕೊಂಡಿವೆ. ಈ ನಿಟ್ಟಿನಲ್ಲಿ ಕನ್ನಡ ವಿಶ್ವವಿದ್ಯಾಲಯವೂ ಶಾಸ್ತ್ರೀಯ ಭಾಷಾ ಯೋಜನೆಯನ್ನು ಕೈಗೆತ್ತಿ ಕೊಂಡಿದೆ. ಈ ಯೋಜನೆಯ ಯಶಸ್ಸಿಗೆ ಕಾರಣರಾದ ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಗಳಾದ ಡಾ. ಎ.ಮುರಿಗೆಪ್ಪ ಅವರಿಗೆ, ಕುಲಸಚಿವರಾದ ಡಾ. ಮಂಜುನಾಥ ಬೇವಿನಕಟ್ಟಿ ಅವರಿಗೆ, ಪ್ರಸಾರಾಂಗದ ನಿರ್ದೇಶಕರಾದ ಡಾ. ಎ. ಸುಬ್ಬಣ್ಣ ರೈ ಅವರಿಗೆ ಮತ್ತು 'ಮಂಟೇಸ್ವಾಮಿ ಕಾವ್ಯ' (ಓದುಪಠ್ಯ) ಪುಸ್ತಕದ ಸಂಪಾದಕರಾದ ಡಾ. ವೆಂಕಟೇಶ ಇಂದ್ವಾಡಿ ಅವರಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪರವಾಗಿ ನಾನು ಹೃತ್ಪೂರ್ವಕವಾಗಿ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ಡಾ. ಮನು ಬಳಿಗಾರ್

# ಶಬ್ದಪಾರಮಾರ್ಗಮಶಕ್ಯಂ

ಕರ್ನಾಟಕದ ಆಧುನಿಕ ಚರಿತ್ರೆಯಲ್ಲಿ ಕರ್ನಾಟಕ ಏಕೀಕರಣ ಒಂದು ಮಹತ್ವಪೂರ್ಣ ಐತಿಹಾಸಿಕ ಘಟನೆ. ಹಾಗೆಯೇ ಕನ್ನಡ ವಿಶ್ವವಿದ್ಯಾಲಯದ ಸ್ಥಾಪನೆಯೂ ಮತ್ತೊಂದು ಮಹತ್ವದ ಘಟನೆ. ಕನ್ನಡ-ಕನ್ನಡಿಗ-ಕರ್ನಾಟಕ ಸಂಸ್ಕೃತಿಯ ಕಲ್ಪನೆಯಡಿಯಲ್ಲಿ ಅಸ್ತಿತ್ವಕ್ಕೆ ಬಂದ ಕನ್ನಡ ವಿಶ್ವವಿದ್ಯಾಲಯದ ಹರವು ವಿಸ್ತಾರವಾದದ್ದು. ಈ ಕಾರಣದಿಂದ ಕನ್ನಡ ವಿಶ್ವವಿದ್ಯಾಲಯದ ಆಶಯ ಮತ್ತು ಗುರಿ ಇತರ ವಿಶ್ವವಿದ್ಯಾಲಯಗಳಿಗಿಂತ ಭಿನ್ನ ಹಾಗೂ ಪ್ರಗತಿಪರ. ಕನ್ನಡದ ಸಾಮರ್ಥ್ಯವನ್ನು ಎಚ್ಚರಿಸುವ ಕಾಯಕವನ್ನು ಉದ್ದಕ್ಕೂ ಅದು ನೋಂಪಿಯಿಂದ ಮಾಡಿಕೊಂಡು ಬಂದಿದೆ. ಕರ್ನಾಟಕತ್ವದ 'ವಿಕಾಸ' ಈ ವಿಶ್ವವಿದ್ಯಾಲಯದ ಮಹತ್ತರ ಆಶಯವಾಗಿದೆ.

ಕನ್ನಡ ಅಧ್ಯಯನ ಮೂಲತಃ ಶುದ್ಧ ಜ್ಞಾನದ, ಕಾಲ, ದೇಶ, ಜೀವನ ತತ್ವದ ಪರವಾಗಿರುವುದರ ಜೊತೆಗೆ ಅಧ್ಯಯನವನ್ನು ಒಂದು ವಾಗ್ವಾದದ ಭೂಮಿಕೆ ಎಂದು ನಾವು ಭಾವಿಸಬೇಕಾಗಿದೆ. ಕನ್ನಡ ಬದುಕಿನ ಚಿಂತನೆಯ ಭಾಗವೆಂದೇ ಅದನ್ನು ರೂಪಿಸಿ ವಿವರಿಸಬೇಕಾಗಿದೆ. ಅಂದರೆ : ದೇಸಿ ಬೇರುಗಳ ಗುರುತಿಸುವಿಕೆ ಕನ್ನಡ ಅಧ್ಯಯನದ ಮುಖ್ಯ ಭಿತ್ತಿಯಾಗಬೇಕಾಗಿದೆ. ಕನ್ನಡ ಸಂಸ್ಕೃತಿಯು ಬಹುತ್ವದ ನೆಲೆಗಳನ್ನು ಆಧರಿಸಿ ರೂಪುಗೊಂಡಿದೆ. ಸಮಾಜಮುಖಿ ಚಿಂತನೆಗಳ ವ್ಯಾಪಕ ಅಧ್ಯಯನ ಬದುಕಿನ ಸಂಕೀರ್ಣ ಲಕ್ಷಣಗಳ ಸ್ವರೂಪವನ್ನು ಇದು ಪರಿಚಯಿಸುತ್ತದೆ. ನಾವು ಇದನ್ನು ಎಲ್ಲ ವಲಯಗಳಲ್ಲಿ ಕನ್ನಡದ ಅನುಷ್ಠಾನದ ಮೂಲಕ ಉಳಿಸಿ, ಬೆಳೆಸಬೇಕಾಗಿದೆ. ಆಗ ಕನ್ನಡ ಸಂಸ್ಕೃತಿಯು ವಿಶ್ವಪ್ರಜ್ಞೆಯಾಗಿ ರೂಪುಗೊಳ್ಳಲು ಸಾಧ್ಯವಾಗುತ್ತದೆ. 'ಕನ್ನಡದ್ದೇ ಮಾದರಿ'ಯ ಶೋಧ ಇಂದಿನ ಮತ್ತು ಬರುವ ದಿನಗಳ ತೀವ್ರ ಅಗತ್ಯವಾಗಿದೆ.

ಕನ್ನಡ ಸಂಸ್ಕೃತಿಯ ಭಾಗವಾಗಿರುವ ಕನ್ನಡ ಅಧ್ಯಯನವು ಕಾಲದಿಂದ ಕಾಲಕ್ಕೆ ಹೊಸ ತಿಳಿವಳಿಕೆಯನ್ನು ತನ್ನ ತೆಕ್ಕೆಗೆ ಜೋಡಿಸಿಕೊಳ್ಳುತ್ತ ಬಂದಿದೆ. ಹೀಗಾಗಿ ವಿದೇಶಿ ಮತ್ತು ದೇಶಿ ವಿದ್ವಾಂಸರು ತೊಡಗಿಸಿಕೊಂಡ ಈ ವಿದ್ವತ್‌ಕ್ಷೇತ್ರದಲ್ಲಿ ಮುಂದಿನ ವಿದ್ವಾಂಸರು ಕಾಲದಿಂದ ಕಾಲಕ್ಕೆ ಹೊಸಬೆಳೆಯನ್ನು ತೆಗೆಯುತ್ತ ಬಂದಿದ್ದಾರೆ. ಕನ್ನಡ ಅಧ್ಯಯನ ಪಳೆಯುಳಿಕೆಯ ಶಾಸ್ತ್ರವಾಗದೆ, ಬದಲಾಗುತ್ತಿರುವ ಕಾಲಮಾನದಲ್ಲಿ ಎದುರಾಗುತ್ತಿರುವ ಆಹ್ವಾನಕ್ಕೆ ತಕ್ಕಂತೆ ತನ್ನ ಗತಿಯನ್ನು ಬದಲಾಯಿಸಿಕೊಳ್ಳುತ್ತ ಬಂದಿರುವುದು ಗಮನಿಸತಕ್ಕ

ಅಂಶ. ಸಾಂಪ್ರದಾಯಿಕ ಚಿಂತನೆಗಳು ಆಧುನೀಕರಣದ ಈ ಕಾಲಘಟ್ಟದಲ್ಲಿ ಸಹಾಲಿಕ ಗೊಳ್ಳುವುದು ಅನಿವಾರ್ಯವಾಗಿದೆ. ಮಾಹಿತಿ ತಂತ್ರಜ್ಞಾನದ ಮೂಲಕ ಜಗತ್ತಿನ ಜ್ಞಾನಪ್ರವಾಹವೇ ನಮ್ಮ ಅಂಗೈಯೊಳಗೆ ಚುಳುಕಾಗುವ ಈ ಸಂದರ್ಭದಲ್ಲಿ ಕನ್ನಡದ ಚಹರೆ ಮತ್ತು ಕನ್ನಡ ಭಾಷೆಯ ಚಲನಶೀಲತೆಯನ್ನು ಶೋಧಿಸಲಿಕ್ಕೆ ಭಾಷಾ ಆಧುನೀಕರಣ ಮತ್ತು ಪ್ರಮಾಣೀಕರಣದ ಪ್ರಕ್ರಿಯೆಗಳ ನೆಲೆಯಲ್ಲಿ ಅಧ್ಯಯನದ ಹೊಸ ಸಾಧ್ಯತೆಗಳನ್ನು ಅನುಲಕ್ಷಿಸಿ, ಭಾಷಾನೀತಿ, ಭಾಷಾಯೋಜನೆ ರೂಪಿಸುವುದು ಅನಿವಾರ್ಯ ಹಾಗೂ ಅವಶ್ಯವಾಗಿದೆ. ಆಗ ಅಧ್ಯಯನದ ಸ್ವರೂಪ ಹಾಗೂ ಬಳಕೆಯ ವಿಧಾನದಲ್ಲಿ ಪರಿವರ್ತನೆ ಸಾಧ್ಯವಾಗುತ್ತದೆ.

ನಮ್ಮೆದುರು ನುಗ್ಗಿ ಬರುತ್ತಿರುವ ಜಾಗತೀಕರಣಕ್ಕೆ ಪ್ರತಿರೋಧವಾಗಿ ನಮ್ಮ ದೇಶೀಯ ಜ್ಞಾನಪರಂಪರೆಯನ್ನು ಮರುಶೋಧಿಸಿ ಆ ಮೂಲಕ ಕುಸಿಯುತ್ತಿರುವ ನಮ್ಮ ಬೇರುಗಳನ್ನು ಬಲಗೊಳಿಸಿಕೊಳ್ಳಬೇಕಾಗಿದೆ. ಭಾಷೆ, ಸಾಹಿತ್ಯ, ವ್ಯಾಕರಣ, ಛಂದಸ್ಸು, ಚರಿತ್ರೆ, ಕೃಷಿ, ವೈದ್ಯ, ಪರಿಸರ ಮುಂತಾದ ಅಧ್ಯಯನ ವಿಷಯಗಳನ್ನು ಹೊಸ ಆಲೋಚನೆಯ ನೆಲೆಯಲ್ಲಿ ವಿಶ್ಲೇಷಿಸಬೇಕಾಗಿದೆ. ಆಧುನಿಕ ವಿಜ್ಞಾನ, ತಂತ್ರಜ್ಞಾನವೇ 'ಜ್ಞಾನ' ಎಂದು ರೂಪಿಸಿರುವ ಇಂದಿನ ಆಲೋಚನೆಗೆ ಪ್ರತಿಯಾಗಿ ಈ ಜ್ಞಾನಶಾಖೆಗಳಲ್ಲಿ ಹುದುಗಿರುವ ದೇಶಿ ಪರಂಪರೆಯ ಜ್ಞಾನದ ಹುಡುಕಾಟ ನಡೆಯಬೇಕಾಗಿದೆ. ಅಂತಹ ಪ್ರಯತ್ನಗಳಿಗೆ ಬೇಕಾದ ಮಾರ್ಗದರ್ಶಕ ಸೂತ್ರಗಳ ಹಾಗೂ ಆಕರ ಪರಿಕರಗಳ ನಿರ್ಮಾಣದ ನೆಲೆ ತುಂಬ ಮುಖ್ಯವಾಗಿದೆ. ಕನ್ನಡ ವಿಶ್ವವಿದ್ಯಾಲಯವು ಕಳೆದ ಹದಿನಾರು ವರ್ಷಗಳಿಂದ ಈ ಕೆಲಸಗಳನ್ನು ಹಲವು ಯೋಜನೆಗಳ ಮೂಲಕ ರೂಪಿಸಿಕೊಂಡಿದೆ, ರೂಪಿಸಿಕೊಳ್ಳುತ್ತಿದೆ. ಇದೊಂದು ಚಲನಶೀಲ ಪ್ರಕ್ರಿಯೆಯಾಗಿದೆ. ಸಮಕಾಲೀನ ಭಾಷಿಕ, ಸಾಂಸ್ಕೃತಿಕ ಸಮಸ್ಯೆಗಳಿಗೆ ಮುಖಾಮುಖಿ ಯಾಗುತ್ತ ಕನ್ನಡ ನಾಡುನುಡಿಯನ್ನು ಹೊಸದಾಗಿ ಶೋಧಿಸುತ್ತಾ, ವಿವರಿಸುತ್ತಾ ಬಂದಿದೆ. ಅಂದರೆ: ಕನ್ನಡದ ಅರಿವಿನ ವಿಕೇಂದ್ರೀಕರಣವೇ ವರ್ತಮಾನದ ಹೊಸ ಬೆಳವಣಿಗೆ. ಇದು ಕನ್ನಡ ವಿಶ್ವವಿದ್ಯಾಲಯದ ಜೀವಧಾತುವಾಗಿದೆ.

ಜನಪದ ಮಹಾಕಾವ್ಯಗಳ ಸಂಗ್ರಹ ಸಂಪಾದನೆಯಲ್ಲಿ ಎರಡು ಮಾದರಿಗಳು ರೂಢಿಗತ ವಾಗಿವೆ. ಒಂದು, ಪ್ರಾಚೀನ ಕೃತಿಗಳ ಗ್ರಂಥ ಸಂಪಾದನೆಯ ಕ್ರಮ. ಇನ್ನೊಂದು ಒಬ್ಬ ಕಲಾವಿದ ಅಥವಾ ಕಲಾತಂಡ ಹಾಡಿದ ಮಹಾಕಾವ್ಯವನ್ನು ಲಿಪ್ಯಂತರ ಮಾಡಿ ಪ್ರಕಟಿಸುವುದು. ಈ ಎರಡೂ ಕ್ರಮಗಳಲ್ಲಿರುವ ತೊಡಕುಗಳನ್ನು ಗಂಭೀರವಾಗಿ ಅಭ್ಯಾಸ ಮಾಡಿ ಓದಿಗೆ ಸುಲಲಿತವಾಗುವ ಮಾದರಿಯೊಂದನ್ನು ಸೃಷ್ಟಿಸಿದ ಕೀರ್ತಿ ಈ ಕೃತಿಯ ಸಂಪಾದಕರಿಗೆ ಸಲ್ಲುತ್ತದೆ.

ಮೊದಲ ಘಟ್ಟದ ಜನಪದ ಮಹಾಕಾವ್ಯ ಸಂಪಾದನಾಕಾರರು ಶಿಷ್ಟ ಮಹಾಕಾವ್ಯಗಳ ಬೃಹತ್ ಪಠ್ಯಕಲ್ಪನೆಯಲ್ಲಿ ಮೌಖಿಕ ಕಾವ್ಯಗಳಿಗೂ ಅನ್ವಯಿಸಿಕೊಂಡು ಸಂಗ್ರಹ ಸಂಪಾದನೆ ಗಳನ್ನು ಮಾಡಿದ್ದಾರೆ. ಇದರಿಂದ ಜನಪದ ಮಹಾಕಾವ್ಯಗಳು ನಿರೀಕ್ಷಿಸಿದ ಮಟ್ಟದಲ್ಲಿ

ಓದುಗರನ್ನು ತಲುಪಿಲ್ಲ ಎಂದು ಈ ಪತ್ಯದ ಸಂಪಾದನಾಕಾರರು ಸರಿಯಾಗಿ ಗುರುತಿಸಿದ್ದಾರೆ. ಕನ್ನಡ ಪ್ರಾಚೀನ ಮಹಾಕಾವ್ಯಗಳ ಸಂಗ್ರಹ ಸಂಪಾದನೆಗಳು ಬಂದ ಹಾಗೆ ಮೌಖಿಕ ಮಹಾಕಾವ್ಯಗಳ 'ಓದುಪತ್ಯ' ಕ್ರಮ ಈ ಕೃತಿಯಿಂದ ಆರಂಭವಾಗಿದೆ. ಆದ್ದರಿಂದ ಈ ಕೃತಿ ಸಂಪಾದಕರಾದ ಡಾ. ವೆಂಕಟೇಶ ಇಂದ್ವಾಡಿ ಅವರಿಗೆ ಕನ್ನಡ ವಿಶ್ವವಿದ್ಯಾಲಯದ ಅಭಿನಂದನೆಗಳು ಸಲ್ಲುತ್ತವೆ.

ಈ ಗ್ರಂಥವನ್ನು ಅಚ್ಚುಕಟ್ಟಾಗಿ ಹೊರತರುತ್ತಿರುವ ಪ್ರಸಾರಾಂಗದ ನಿರ್ದೇಶಕರಾದ ಡಾ. ಎ. ಸುಬ್ಬಣ್ಣ ರೈ ಮತ್ತು ಸಹಾಯಕ ನಿರ್ದೇಶಕರಾದ ಶ್ರೀ ಬಿ. ಸುಜ್ಞಾನಮೂರ್ತಿ ಅವರಿಗೆ ಆಭಾರಿಯಾಗಿದ್ದೇನೆ.

ಡಾ. ಎ. ಮುರಿಗೆಪ್ಪ
ಕುಲಪತಿ

# ಸಂಪಾದಕನ ಮಾತು

ಹದಿನೈದು ವರ್ಷಗಳ ಹಿಂದೆ ಅಂದರೆ ೧೯೮೦ರಲ್ಲಿ ನೀಲಗಾರ ಪರಂಪರೆಯನ್ನು ಪ್ರವೇಶ ಮಾಡಿದಾಗ ಕತೆಗಾರರಾಗಿ ತುಂಬಾ ಹೆಸರು ಮಾಡಿದ್ದವರು ದಿ. ಶ್ರೀಕಾರಾಪುರದ ಪುಟ್ಟಮಾದಯ್ಯನವರು. ಅಸಂಖ್ಯಾತ ಶಿಷ್ಯಪಡೆಯನ್ನು ನಿರ್ಮಾಣ ಮಾಡಿದ್ದ ಪುಟ್ಟಮಾದಯ್ಯ ನವರನ್ನು ಭೇಟಿಯಾದಾಗ ಅವರಿಗೆ ತೊಂಬತ್ತೆರಡು ವರ್ಷವಾಗಿತ್ತು ಅವರು ಹಾಡುವ ಸ್ಥಿತಿಯಲ್ಲಿ ಇರಲಿಲ್ಲ. 'ನಿಮ್ಮ ಶಿಷ್ಯರುಗಳಲ್ಲಿ ಯಾರು ಚೆನ್ನಾಗಿ ಕತೆ ಮಾಡುತ್ತಾರೆ ಹೇಳಿ' ಎಂದೆ. ಇವರ ಶಿಷ್ಯರುಗಳಲ್ಲಿ ಆಗ ಪ್ರಸಿದ್ಧಿಯಾಗಿದ್ದವರು ದಿ. ಶ್ರೀಕೆಬ್ಬೇಪುರದ ರಾಚಯ್ಯನವರ ತಂಡ, ದಿ. ಶ್ರೀಕುಂತೂರು ಕಾಳಶೆಟ್ಟಿ ತಂಡ ಹಾಗೂ ಶ್ರೀಮೋಳೆ ರಾಜಣ್ಣನವರ ತಂಡಗಳು.

'ಮೋಳೆರಾಜ ಇಂಗೇ ಇರ್‍ತಾನಂತಾ ಹೇಳಾದು ಕಷ್ಟಾ, ಕುಡ್ತೆ ಒಂದ್ ತರಾ ಕುಡಿದಿದ್ರೆ ಒಂದ್ತರಾ, ಆದ್ರಾ ದೊಡ್ಡವರ ಕತಾಲೀ ಅವ್ನ ಬಾನಿ ಇವರ್‍ಯಾರ್‍ಗು ಇಲ್ಲ. ನಾ ಬಿತ್ತದ ಬೆಳಲೀ ಎಲ್ಲ ಅಕ್ಕಲು ಆಯ್‌ಕಂಡ್ರಾ ಇವನೊಬ್ಬನೇ ಅರಿ ತಬ್ಕಂಡಮ' ಎಂದು ಪುಟ್ಟ ಮಾದಯ್ಯನವರು ರಾಜಣ್ಣ ಸಾಮರ್ಥ್ಯ ಮತ್ತು ತಂಟೆಗಳನ್ನು ಸೇರಿಸಿ ಆಡಿದ ಮಾತು ನನಗೆ ಇಷ್ಟವಾಯಿತು. ಒಂದು ವರ್ಷ ಪತ್ಯ ಸಂಪಾದನೆಯ ಕಾಲದಲ್ಲಿ ಅದು ನನ್ನ ಅನುಭವಕ್ಕೂ ಬಂತು.

ಅವರನ್ನು ಮೊದಲು ಕೊಳ್ಳೇಗಾಲದ ಮೋಳೆಯ ಗುಡಿಸಿಲಿನಲ್ಲಿ ಭೇಟಿ ಮಾಡಿ, 'ಧರೆಗೆ ದೊಡ್ಡವರ ಕತೆಯ ಮೊದಲಿಂದಾ ಕೊನೆತನಕ ಹಾಡಿಕೊಡಿ ಅದನ್ನ ಬರ್ದು ಪುಸ್ತಕ ಮಾಡ್ತೀನಿ, ನೀವೇ ಹಾಡಿರದು ಅಂತಾ ಹೆಸ್ರು ಹಾಕ್ತೀನಿ' ಎಂದೆ. 'ಇದರ ತಾಳು ತುದಿ ಬಲ್ಲವರ್‍ಯಾರ ಹೋಗಿ' ಎಂದು ಕಳಚಿಕೊಂಡರು.

ನಂತರ ಕೊಳ್ಳೇಗಾಲದಲ್ಲಿ ರಾತ್ರಿ ಮಲಗಿದ್ದಾಗ ಮೈಕಿನಲ್ಲಿ ಮಂಟೇಸ್ವಾಮಿಗಳ ಕತೆಯನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದದ್ದು ಕೇಳಿ ಬಂತು. ಹರಿಜನ ಕೇರಿಯಲ್ಲಿ ಕತೆ ನಡೆಯುತ್ತಿದೆ ಎಂದು ತಿಳಿದು ಅಲ್ಲಿಗೋದೆ. ಅದೇ ರಾಜಣ್ಣ ತಂಬೂರಿಯನ್ನು ಹೆಗಲಿಗೇರಿಸಿಕೊಂಡು ಗಗ್ಗರಗಳನ್ನು ಮೀಟುತ್ತಾ ತನ್ಮಯನಾಗಿ ಹಾಡುತ್ತಿದ್ದ, ಇಡೀ ರಾತ್ರಿ ಅಲ್ಲಿದ್ದು ಕತೆ ಕೇಳಿದೆ. ಬೆಳಕರಿದಾಗ ಮಂಗಳ ಹಾಡಿದ ನಂತರ ಅವರನ್ನು ಭೇಟಿಯಾಗಿ ಸಂಪಾದನೆಯ ನನ್ನ ಅಹವಾಲನ್ನು ಮತ್ತೆ ಹೇಳಿದೆ. ಕತೆ ಮುಗಿಸಿದ ಖುಷಿಯಲ್ಲಿದ್ದ ರಾಜಣ್ಣ 'ಮನ್ಗ ಬನ್ನಿ ಕೂತ್ಕ ಮಾತಾಡಮು' ಎಂದರು.

ಮತ್ತೆ ಅವರ ಗುಡಿಸಿಲಿಗೆ ಹೋದೆ. ನನ್ನ ಊರು ಕೇರಿ ಉದ್ಯೋಗಗಳನ್ನು ತಿಳಿದುಕೊಂಡು ಕತೆಗೆ ಒಪ್ಪಿದರು. 'ಕಾಸ್ ಎಷ್ಟು ಕೊಟ್ಟರೀ' ಎಂದರು. 'ಜನ ನಿಮ್ಗ, ನಿಮ್ಮ ಸೆಟ್‌ನವರ್‍ಗೆ

ಒಂದು ರಾತ್ರಿ ಕತ್ಗಾ ಎಷ್ಟು ಕೊಟ್ಟಿರು ಅಷ್ಟೇ ಕೊಡ್ತಿನಿ'. 'ಸರಿ ನಾಳಾ ಇಂದ್ನೇ ಕತಾ ಶುರು, ರಾತ್ರಿ ಉಣ್ಕಂಡು ಟೇಪ್ ಎತ್ಕ ಬಂದ್ಬುಡಿ ಇಲ್ಲೇ ಜಗ್ಲಿ ಮೇಲಾ ಕೂತ್ಕಂಡು ಕತಾ ಮಾಡ್‌ಕೊಡ್ತೀನಿ'ಎಂದರು.

ಕತೆ ಶುರುವಾಗಿ ಆರು ದಿನವಾದರೂ ಮುಗಿಯುವ ಲಕ್ಷಣಗಳು ಕಾಣಲೇ ಇಲ್ಲ. ಪ್ರತಿ ರಾತ್ರಿ ಅವರ ಸಂಭಾವನೆ ಬೀಡಿಪೆಟ್ಟಿ, ಕಡ್ಡಿ ಕರ್ಪೂರ, ಸರಾಪು ಸಮಾರಾಧನೆ ನಡೆಯುತ್ತಲೇ ಇತ್ತು. ರಾಜಣ್ಣ ದುಡ್ಡಿಗಾಗಿ ಅನಗತ್ಯವಾಗಿ ಕತೆ ಎಳೆಯುತ್ತಿದ್ದಾರೆ ಎನ್ನುವ ಅನುಮಾನ ಬಂತು. 'ದಿನ್ದ ಲೆಕ್ಕ ಬ್ಯಾಡ ಒಟ್ಟು ಎಷ್ಟ್ ಕೊಡಬೇಕು ಹೇಳಿ' ಎಂದೆ. ಇಷ್ಟುಂತಾ ಫಿಕ್ಸ್ ಆಯ್ತು. ಎರ‍್ಡ ರಾತ್ರಿಗೆ ಕತೆ ಮುಗಿಸಿ ನನ್ನನ್ನು ಫೂಲ್ ಮಾಡಿಬಿಟ್ಟರು. ಆಮೇಲೆ ಏಕೋ ಏನೋ ರಾಜಣ್ಣನಿಗೆ ನನ್ನ ಮೇಲೆ ವಿಶ್ವಾಸ ಬಂತು. 'ನಾನು ಎಲ್ಲೆಲ್ಲಿ ಕತಾಒಪ್ಪಿ ಕತಾ ಮಾಡ್ತೀನಿ ಅಲ್ಲಿಗಾ ಬಂದು ಟೇಪ್ ಮಾಡ್ಕಳಿ ಒಂದು ಪೈಸಾನು ಕೊಡಬೇಡಿ' ಅಂದರು. ಹಾಡುವವರ ಬೆನ್ನತ್ತಿ ಆರು ತಿಂಗಳು ಅಲೆದೆ, ಒಟ್ಟು ಹನ್ನೆರಡು ಗಂಟೆಗಳ ಕಾವ್ಯ ನನಗೆ ಸಿಕ್ಕಿತು. ಅದನ್ನು ಪಠ್ಯಂತರ ಮಾಡಿ 'ಧರೆಗೆ ದೊಡ್ಡವರ ಕತೆ' ಎನ್ನುವ ಶೀರ್ಷಿಕೆಯಲ್ಲಿ ೧೯೯೭ರಲ್ಲಿ ಪ್ರಕಟಿಸಿದೆ.

ಪಠ್ಯವನ್ನು ವಿಸ್ತರಿಸುವ ಸಂಕ್ಷಿಪ್ತಗೊಳಿಸುವ ಕಲೆಗಾರಿಕೆ ರಾಜಣ್ಣನಂತೆ ಎಲ್ಲ ಕಲಾವಿದರು ಕರಗತ ಮಾಡಿಕೊಂಡಿದ್ದಾರೆ. ಮೌಖಿಕ ಕಾವ್ಯಗಳಲ್ಲಿ ಕೆಲವು ಸಿದ್ಧವರ್ಣನೆಗಳು, ಉಪಕತೆಗಳು, ಅಸಂಖ್ಯಾತ ನುಡಿಗಟ್ಟುಗಳು, ಬಿಡಿಪದಗಳು ಇರುತ್ತವೆ. ಮುಂದೆ ಕುಂತಾ ಪ್ರೇಕ್ಷಕರ ಅಪೇಕ್ಷೆಗೆ ಅನುಗುಣವಾಗಿ ಇವುಗಳ ಹಿಗ್ಗು-ಕುಗ್ಗು ನಡೆಯುತ್ತದೆ. ಇದು ಶ್ರವ್ಯ ಕಾವ್ಯದ ಲಕ್ಷಣ.

ಕರ್ನಾಟಕದಲ್ಲಿ ಜನಪದ ಸಾಹಿತ್ಯದ ಸಂಗ್ರಹ ಸಂಪಾದನೆ ಮತ್ತು ಅಧ್ಯಯನಕ್ಕೆ ಸುಮಾರು ೧೫೦ ವರ್ಷಗಳ ಇತಿಹಾಸವಿದೆ. ಮೊದಲ ಘಟ್ಟದಲ್ಲಿ ಭಾರತವನ್ನು ಆಳುತ್ತಿದ್ದ ವಿದೇಶಿ ವಿದ್ವಾಂಸರು ಬ್ರಿಟಿಷ್ ಸಾಮ್ರಾಜ್ಯಶಾಹಿ ಉದ್ದೇಶಗಳಿಗೆ ಅನುಗುಣವಾಗಿ ಜನಪದ ಸಾಹಿತ್ಯ ಸಂಗ್ರಹಕ್ಕೆ ಕೈ ಹಾಕಿದರು. ಇಂಗ್ಲೆಡಿನ 'ಇಂಡಿಯನ್ ಆಂಟಿಕ್ವಿಟಿ'ಪತ್ರಿಕೆಯಲ್ಲಿ ಫ್ಲೀಟ್‌ರು ಸಂಗ್ರಹಿಸಿದ ಐದು ಲಾವಣಿಗಳು(೧೮೮೫) ಪ್ರಕಟವಾದವು.ಇವೆಲ್ಲಾ ಲಾವಣಿಗಳಾಗಿದ್ದು ಅವು ಬ್ರಿಟಿಷರ ವಿರುದ್ಧ ದಂಗೆ ಎದ್ದಿದ್ದ ಸ್ಥಳೀಯ ರಾಜರ ಮರಣ ಕತೆಗಳಾಗಿವೆ.

ನಂತರ ಹಲಸಂಗಿ ಗೆಳೆಯರ ಗುಂಪು ಜನಪದ ಸಾಹಿತ್ಯ ಸಂಗ್ರಹಕ್ಕೆ ತೊಡಗಿತು, ಇವರಿಗೆ ಜನಪದವೂ ಸಾಹಿತ್ಯ ಎಂದು ಹೇಳಬೇಕಾದ ಕಾಲದ ತವಕವಾಗಿತ್ತು. ಸಾಹಿತ್ಯದ ದಿಗ್ಗಜರಾದ ಬಿ.ಎಂ.ಶ್ರೀ. ಬೇಂದ್ರೆ, ಮಾಸ್ತಿಯವರ ಸಾಹಿತ್ಯಕ ಹೊತ್ತಾಸೆ ಅನಿವಾರ್ಯವಾಗಿ ಅವರ ಬೆನ್ನುಡಿ-ಮುನ್ನುಡಿಗಳನ್ನು ಬೆರೆತ ಮೊದಲ ಸಂಕಲನ 'ಗರತಿಯ ಹಾಡು' ಬರುತ್ತದೆ. ಇದರ ಮೂಲ ಉದ್ದೇಶ ಅವರ ಕ್ಷೇತ್ರವಾಗಿದ್ದ ಸಾಹಿತ್ಯದಲ್ಲಿ ಜನಪದವನ್ನು ವಿಲೀನಗೊಳಿಸುವುದು ಮತ್ತು ಶಿಷ್ಟ ಸಾಹಿತ್ಯದ ಶ್ರೇಷ್ಠತೆಯನ್ನು ಮುಂದುವರಿಸುವುದು.

ಎರಡನೇ ಹಂತ ಏಪ್ಪತ್ತರ ದಶಕದ್ದು. ಈಗಾಗಲೇ ವಿದೇಶಿ ವಿದ್ವಾಂಸರು ಪಾಶ್ಚಿಮಾತ್ಯ ದೇಶಗಳಲ್ಲಿ ಜನಪದ ಅಧ್ಯಯನದ ಮಹತ್ವವನ್ನು ಜಗತ್ತಿಗೆ ಪರಿಚಯಿಸಿದ್ದರು. ಅದರ ಪರಿಣಾಮವಾಗಿ ವಿಶ್ವವಿದ್ಯಾಲಯದ ಜ್ಞಾನ ಶಿಸ್ತುಗಳಲ್ಲಿ ಜನಪದದ ಜ್ಞಾನಶಿಸ್ತು ಮುಖ್ಯ ಎಂದು ತೋರಿಸಿಕೊಟ್ಟಿದ್ದರು. ಅದರ ಪರಿಣಾಮವಾಗಿ ಕರ್ನಾಟಕದಲ್ಲೂ ವಿಶ್ವವಿದ್ಯಾಲಯಗಳಲ್ಲಿ ಜನಪದವನ್ನು ವಿಶ್ವವಿದ್ಯಾಲಯದ ಪಠ್ಯಕ್ರಮದಲ್ಲಿ ಅಳವಡಿಸುವ ಪ್ರಯತ್ನಗಳು ನಡೆದವು. ಮೈಸೂರು ವಿಶ್ವವಿದ್ಯಾಲಯದಲ್ಲಿ ಮೊಟ್ಟಮೊದಲಿಗೆ ಜನಪದ ಸ್ನಾತಕೊತ್ತರ ಪದವಿಯನ್ನು ಪ್ರಾರಂಭಿಸಲಾಯಿತು. ಪ್ರೊ. ದೇ.ಜ.ಗೌ, ಪ್ರೊ. ಹಾ.ಮಾ.ನಾಯಕರು ಇದನ್ನು ಪಠ್ಯಕ್ರಮದಲ್ಲಿ ಅಳವಡಿಸಲು ಬೇಕಾದ ಸಿದ್ಧತೆಗಳನ್ನು ಮಾಡಿ ಅನೇಕ ಕೃತಿಗಳನ್ನು ಬರೆದರು. ಧಾರವಾಡದಲ್ಲಿ ಡಾ. ಗದ್ದಗಿ ಮಠ ಇವರು 'ಕರ್ನಾಟಕ ಜನಪದ ಗೀತೆಗಳ ಅಧ್ಯಯನ' ಪಿಎಚ್.ಡಿ ಗ್ರಂಥ, ಪ್ರೊ. ಜೀಶಂಪಾ ಅವರ 'ದಕ್ಷಿಣಾ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು', ಡಾ. ನೇಗಿನಾಳರ 'ಮೈಲಾರಲಿಂಗ ಒಂದು ಅಧ್ಯಯನ', ಡಾ. ಶಂಕರನಾರಾಯಣ. 'ಕಾಡು ಗೊಲ್ಲರು ಒಂದು ಅಧ್ಯಯನ' ಕೃತಿಗಳು ಜನಪದ ಅಧ್ಯಯನಕ್ಕೆ ಹೊಸ ನಾಂದಿಯನ್ನೇ ಹಾಡಿತು. ಅದೇ ಸಂದರ್ಭದಲ್ಲಿ ಡಾ. ಪಿ.ಕೆ.ರಾಜಶೇಖರ ಅವರ ಮಲೆಮಹಾದೇಶ್ವರ ಮಹಾಕಾವ್ಯವು ಪ್ರಕಟವಾಯಿತು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 'ಸಿರಿ ಜನಪದ ಕಾವ್ಯ'ವನ್ನು ಡಾ. ಅಮೃತಸೋಮೇಶ್ವರರರು ಪ್ರಕಟಿಸಿದರು. ನಂತರ ಪ್ರೊ. ನಾವಡ ದಂಪತಿಗಳು ಇದರ ಬಗ್ಗೆ ಉನ್ನತ ಅಧ್ಯಯನಗಳನ್ನು ಮಾಡಿ ತುಳುಭಾಷೆಯಲ್ಲಿ ಸಿರಿ ಕಾವ್ಯವನ್ನು ಪ್ರಕಟಿಸಿದರು. ಸಿರಿ ಕಾವ್ಯದ ಬಗ್ಗೆ ಪ್ರೊ. ವಿವೇಕ್ ರೈ, ಪ್ರೊ. ಚಿನ್ನಪ್ಪಗೌಡರು ವಿದೇಶಿ ವಿದ್ವಾಂಸರೊಟ್ಟಿಗೆ ಸೇರಿ ಅಧ್ಯಯನಗಳನ್ನು ಮಾಡಿ ಪ್ರಕಟಿಸಿದರು. ನಂತರ ಡಾ. ವೀರಣ್ಣದಂಡೆ ಅವರ 'ಜನಪದ ಹಾಲುಮತ ಮಹಾಕಾವ್ಯ' ಬಂತು. ಮೂರನೇ ಹಂತದಲ್ಲಿ ಕನ್ನಡ ವಿಶ್ವವಿದ್ಯಾಲಯ ಬುಡಕಟ್ಟು ಕಾವ್ಯ ಮಾಲೆಯಲ್ಲಿ ಒಬ್ಬನೇ ಕಲಾವಿದ ಹಾಡಿದ ಪಠ್ಯಗಳು ಬಂದವು. 'ಮಂಟೇಸ್ವಾಮಿಕಾವ್ಯ' ಪ್ರೊ. ಹಿ.ಚಿ. ಬೋರಲಿಂಗಯ್ಯ, 'ಜುಂಜಪ್ಪನ ಕಾವ್ಯ' ಡಾ. ಚೆಲುವರಾಜು, 'ಮೈಲಾರಲಿಂಗ' ಡಾ. ಮಂಜುನಾಥ ಬೇವಿನಕಟ್ಟೆ, 'ಕೃಷ್ಣಗೊಲ್ಲರ ಕಾವ್ಯ' ಡಾ. ಮೈತ್ರಿ ಕಾಮಣ್ಣ, 'ಮಾದೇಶ್ವರ' ಡಾ. ಕೇಶವನ್ ಪ್ರಸಾದ್. ಸಂಪಾದಿತ ಮಹಾಕಾವ್ಯಗಳು ಪ್ರಕಟವಾದವು.

ಶಿಷ್ಟ ಮಹಾಕಾವ್ಯಗಳಲ್ಲಿ ಅಷ್ಟದಶಾವರ್ಣನೆಗಳು, ಯುದ್ಧ ಪ್ರಸಂಗ ಇತ್ಯಾದಿಗಳು ಬರುವುದರಿಂದ ಬೃಹತ್ ಪಠ್ಯಗಳಾಗಿವೆ. ಇದೇ ಕಲ್ಪನೆಯನ್ನು ಜನಪದ ಕಾವ್ಯಗಳಿಗೂ ಅನ್ವಯಿಸಿಕೊಂಡು ನಮ್ಮ ಮೊದಲಘಟ್ಟದ ಸಂಪಾದನಕಾರರು ಅದರ ಗಾತ್ರವನ್ನು ವಿಸ್ತರಿಸಿ ಬೃಹತ್ ಪಠ್ಯಗಳನ್ನು ಮಾಡಿ ಜನಪದ ಮಹಾಕಾವ್ಯಗಳೆಂದು ಕರೆದುಕೊಂಡರು. ಎರಡನೇ ಹಂತದಲ್ಲಿ ಒಬ್ಬ ಕಲಾವಿದನ ತಂಡ ಹಾಡಿದ ಕತೆಗಳ ಲಿಪ್ಯಂತರಗಳು ಬಂದವು. ಇದಕ್ಕೆ ನಮ್ಮ ವಿಶ್ವವಿದ್ಯಾಲಯದ ಬುಡಕಟ್ಟು ಕಾವ್ಯ ಮಾಲೆ ಉದಾಹರಣೆ. ಜನಪದ ಕಾವ್ಯಗಳನ್ನು ಮಹಾಕಾವ್ಯಗಳೆಂದು ಕರೆಯುಬಾರದು ಎಂಬುದು ನನ್ನ ವಾದವಲ್ಲ. ಆದರೆ ಪುಟಸಂಖ್ಯೆ

ಹೆಚ್ಚಿದ್ದರೆ ಮಾತ್ರ 'ಮಹಾಕಾವ್ಯ' ಎನ್ನುವ ನಿಯಮ ಮೌಖಿಕ ಕಾವ್ಯಗಳಿಗೆ ಅನ್ವಯಿಸುವುದಿಲ್ಲ. ಇದಕ್ಕೆ ನನ್ನ ಈ ಪಠ್ಯವೇ ಸಾಕ್ಷಿಯಾಗಿದೆ. ಜನಪದ ಕಾವ್ಯಗಳಲ್ಲಿ ಸೃಷ್ಟಿ-ಸ್ಥಿತಿ-ಲಯಗಳು ಬರುವ ಕಾವ್ಯಗಳನ್ನು ಮಹಾಕಾವ್ಯಗಳೆಂದು ಕರೆಯಬಹುದು. ಉಳಿದವುಗಳನ್ನು ಜನಪದ ಕಾವ್ಯಗಳೆಂದು ಕರೆಯುವುದೇ ಸೂಕ್ತ. ಈಗ ಸಂಗ್ರಹವಾಗಿರುವ ಮಹಾಕಾವ್ಯಗಳೆಂದು ಕರೆಯುತ್ತಿರುವ ಪಠ್ಯಗಳು ಪುನಾರಾವರ್ತನೆಯಿಂದ ಸೊರಗಿ ಸುಲಲಿತ ಓದು ಸಾಧ್ಯವಾಗದೆ ತಲುಪಬೇಕಾದಷ್ಟು ಓದುಗರನ್ನು ತಲುಪಿಲ್ಲ. ಈ ಮಾತು ನಾನು ಸಂಪಾದಿಸಿರು 'ಧರೆಗೆ ದೊಡ್ಡವರ ಕತೆಗೂ ಅನ್ವಯಿಸುತ್ತದೆ. ಇದನ್ನು ಪಠ್ಯವಾಗಿ ಮತ್ತೊಮ್ಮೆ ಬರಹಕ್ಕೆ ತರಬೇಕು ಎನ್ನುವ ನನ್ನ ಬಹು ದಿನದ ಆಸೆ ಈ ಪಠ್ಯ ಮಾಡುವ ಮೂಲಕ ಈಡೇರಿದೆ.

ಮೌಖಿಕವಾಗಿರುವ 'ಉಪಭಾಷೆ'ಗಳನ್ನು ಬಳಸಿಕೊಂಡು ಕತೆ ಕಾದಂಬರಿಗಳನ್ನು ಬರೆಯುವ ಪರಿಪಾಠ ನವೋದಯ ಸಾಹಿತಿಗಳಿಂದಲೇ ಪ್ರಾರಂಭವಾಯಿತು. ಇವುಗಳಲ್ಲಿ ಕುವೆಂಪು ಕಾದಂಬರಿಗಳು ಜಗತ್ತಿನ ಶ್ರೇಷ್ಠ ಕಾದಂಬರಿಗಳ ಪಟ್ಟಿಗಳಲ್ಲಿ ಸೇರುವ ಸಾಮರ್ಥ್ಯವನ್ನು ಪಡೆದವು. ಎಪ್ಪತ್ತರ ದಶಕದಲ್ಲಿ ಇದರ ಕಾವು ಇನ್ನು ಹೆಚ್ಚಾಯಿತು. ಉತ್ತರ ಕರ್ನಾಟಕದ ಉಪಭಾಷೆಯನ್ನು ಬಳಸಿಕೊಂಡು ಚೆನ್ನಣ್ಣವಾಲಿಕಾರ 'ಬೆಳ್ಳ' ಕಾದಂಬರಿಯನ್ನು ಬರೆದರು. ಇದು ಕಾದಂಬರಿಕಾರನ ಬೆಸುಗೆಯಿಲ್ಲದೆ ಸ್ಥಳೀಯ ಭಾಷೆಯ ಒಂದು ದಾಖಲಾತಿಯಾಗಷ್ಟೇ ಆಗಿ ಸೋತು ಹೋಯಿತು. ದೇವನೂರು ಮಹದೇವ ಅವರ 'ಕುಸುಮ ಬಾಲೆ' ಮಹಾದೇವ ಅವರ ಅಭೂತಪೂರ್ವ ಸೃಜನಶೀಲ ಬೆಸುಗೆಯಿಂದ ಶ್ರೇಷ್ಠ ಕಾದಂಬರಿಯಾಗಿ ಹೆಸರುವಾಸಿಯಾಯಿತು. ಅನೇಕ ಮಂದಿ ವಿಮರ್ಶಕರು ಇದನ್ನು ನಂಜನಗೂಡಿನ ಉಪಭಾಷೆಯಲ್ಲಿ ಬರೆದ ಕಾದಂಬರಿ ಎಂದು ಕರೆದರು. ಆದರೆ ಅದು ನಂಜನಗೂಡಿನ ಭಾಷೆಯಲ್ಲ ದೇವನೂರು ಓದುವ ವರ್ಗಕ್ಕೆ ಕಟ್ಟಿಕೊಟ್ಟ ಮಹಾದೇವರ ಭಾಷೆಯಾಗಿದೆ. ಇಂದು ಜನಪದ ಸಂಪಾದನಕಾರರು ಮೌಖಿಕವಾದ ಶ್ರೋತೃ ವರ್ಗದ ಪಠ್ಯವನ್ನು ಓದುಗರ ಪಠ್ಯವಾಗಿ ಮಾಡುವ ಕಲಾವಿದರಾಗಬೇಕಾಗಿದೆ.

ಬೃಹತ್ ಪಠ್ಯಗಳ ನಿರ್ಮಾಣದಿಂದ ಜನಪದ ಕಾವ್ಯಗಳ ಓದುಗರ ಸಂಖ್ಯೆ ಕಡಿಮೆಯಾಗುತ್ತಿದೆ ಮತ್ತು ಓದಿಗೆ ಬೃಹತ್ ಪಠ್ಯದ ಅಗತ್ಯವು ಇಲ್ಲ. ಶಿಷ್ಟ ಮಹಾಕಾವ್ಯಗಳನ್ನು ಓದುಗರಿಗೆ ತಲುಪಿಸಲು, ಅರ್ಥೈಸಲು ಸಂಗ್ರಹಗಳು, ಸರಳ ಸಂಪಾದನೆಗಳು ಬಂದ ಹಾಗೆ ಜನಪದ ಮಹಾಕಾವ್ಯಗಳ 'ಓದುಪಠ್ಯ'ಗಳನ್ನು ಪುನರ್ ರೂಪಿಸಬೇಕಾಗಿದೆ, ಆ ಮೂಲಕ ಅದು ಹೆಚ್ಚು ಓದುಗರನ್ನು ತಲುಪುತ್ತದೆ. ಈಗ ಕರ್ನಾಟಕದಲ್ಲಿ ಪ್ರಕಟವಾಗಿರುವ ಎಲ್ಲಾ ಜನಪದ ಮಹಾಕಾವ್ಯಗಳನ್ನು ಸಂಕೀರ್ಣಗೊಳಿಸಿ ವಿದ್ಯಾರ್ಥಿಗಳಿಗೆ, ಸಾಹಿತ್ಯ ಅಭ್ಯಾಸಿಗರಿಗೆ ಕಥಾಸಾರಗಳನ್ನು ಕೊಡದೆ ತಲುಪಿಸುವುದು ನಮ್ಮ ಕಾಲದ ಒತ್ತಡವಾಗಿದೆ. ವಿದ್ಯಾರ್ಥಿಗಳು ಬೃಹತ್ ಪಠ್ಯಗಳನ್ನು ಓದದೇ ಸಂಪಾದಕರು ಕೊಡುವ ಕಥಾಸಾರವನ್ನು ಓದಿಕೊಂಡು ಪರೀಕ್ಷೆಗಳನ್ನು ಬರೆಯುತ್ತಿದ್ದಾರೆ.

ಪ್ರಸ್ತುತ ಪಠ್ಯವನ್ನು ರೂಪಿಸಲು ಐದು ಪಠ್ಯಗಳನ್ನು ಆಕರವಾಗಿ ಬಳಸಿದ್ದೇನೆ

೧. ಶ್ರೀ ಮಂಟೇಸ್ವಾಮಿ ಕಾವ್ಯ, ಸಂ.ಜೀ ಶಂ ಪರಮಶಿವಯ್ಯ,೧೯೭೩.

೨. ಧರೆಗೆ ದೊಡ್ಡವರ ಕಾವ್ಯ, ಸಂ. ಟಿ.ಎಂ.ಪರಶಿವಮೂರ್ತಿ. ೧೯೮೦.

೩. ಧರೆಗೆದೊಡ್ಡವರ ಕತೆ, ಸಂ.ವೆಂಕಟೇಶಇಂದ್ವಾಡಿ,೧೯೯೭.

೪. ಮಂಟೇಸ್ವಾಮಿ ಸಂ. ಹಿ.ಚಿ ಬೋರಲಿಂಗಯ್ಯ,೧೯೯೭

೫. ಕಬ್ಬೇಪುರದ ರಾಚಯ್ಯ ಹಾಡಿರುವ ಮಂಟೇಸ್ವಾಮಿ ಮೌಖಿಕ ಕಾವ್ಯ,೧೯೯೯(ಅಪ್ರಕಟಿತ)

ಮೇಲ್ಕಂಡ ಪಠ್ಯಗಳಲ್ಲಿ ಇರುವ ಪುನರಾವರ್ತನೆ ತೆಗೆದು, ಸಾಹಿತ್ಯಕವಾಗಿ ಬೇರೆ ಬೇರೆ ಪಠ್ಯಗಳಲ್ಲಿ ಬರುವ ಪ್ರಸಂಗಳನ್ನು ಹೆಕ್ಕಿ ಈ ಪಠ್ಯವನ್ನು ರೂಪಿಸಿದ್ದೇನೆ, ಯಾವ ವರ್ಣನೆ ಯಾವ ಭಾಗಕ್ಕೆ ಹೆಚ್ಚು ಸೂಕ್ತ ಎಂಬುದನ್ನು ಅರಿತು. ಉಪಕತೆಗಳು ಎಲ್ಲಿ ಬರುವುದು ಔಚಿತ್ಯ ಎಂಬುದನ್ನು ಅಭ್ಯಾಸ ಮಾಡಿ ಇದನ್ನು ಸಿದ್ಧ ಪಡಿಸಿದ್ದೇನೆ. ಹೀಗೆ ಮಾಡುವಾಗ ಕಲಾವಿದ ಹಾಡುವ ಇತರ ಪಠ್ಯಗಳ ಸಂಪೂರ್ಣ ಅಭ್ಯಾಸವಾಗಬೇಕು. ಸಾಮಾನ್ಯವಾಗಿ ಒಬ್ಬ ಕಲಾವಿದ ಮೂರ್‍ನಾಲ್ಕು ಪಠ್ಯಗಳನ್ನು ಕಲಿತಿರುತ್ತಾನೆ. ರಾಜಣ್ಣ ಮಹಾಕಾವ್ಯವೆನಿಸಿ ಕೊಂಡಿರುವ ಮಾದಪ್ಪನ ಕತೆಯನ್ನು ಹಾಡುತ್ತಾರೆ. ಇದಲ್ಲದೆ ಐದು ಕಥನಕಾವ್ಯಗಳನ್ನು ಹಾಡುತ್ತಾರೆ. ಉದಾಹರಣೆಗೆ ಮಂಟೇಸ್ವಾಮಿ ಕಾವ್ಯದಲ್ಲಿ ಮುತ್ತತ್ತಿರಾಯನ ಪ್ರಸಂಗವಿದೆ. ಬಿಳಿಗಿರಿರಂಗನ ಕತೆಯ ವರ್ಣನ್ನೆಗಳನ್ನೆಲ್ಲಾ ಯಥಾವತ್ತಾಗಿ ಮುತ್ತತ್ತಿರಾಯನಿಗೆ ಬಳಸುತ್ತಾನೆ. ಕೆಲವು ವರ್ಣನೆಗಳು ಬಿಳಿಗಿರಿರಂಗನ ಕತೆಗೆ ಹೊಂದಾಣಿಕೆಯಾಗುವಷ್ಟು ಮುತ್ತತ್ತಿರಾಯನಿಗೆ ಕೂರುವುದಿಲ್ಲ. ಮಂಟೇಸ್ವಾಮಿ ಕತೆಗೆ ಹೊಂದಾಣಿಕೆಯಾಗುವ ಜಗತ್ ಸೃಷ್ಟಿ ಸಾಲು, ಮಾದೇಶ್ವರ ಕತೆಗೆ ಹೊಂದುವುದಿಲ್ಲ. ಆದರೆ ಎರಡು ಸಂಪಾದನಾ ಪಠ್ಯಗಳಲ್ಲೂ ಜಗತ್ ಸೃಷ್ಟಿ ಸಾಲು ಪ್ರಕಟಿಸಿದ್ದಾರೆ. ಮಂಟೇಸ್ವಾಮಿ ಕತೆಯನ್ನು ಹಾಡುವ ಎಲ್ಲ ಕಲಾವಿದರು ಮಡಿವಾಳ ಮಾಚಯ್ಯಯನ ಸಾಲಿನಲ್ಲಿ ಮಾಚಯ್ಯನನ್ನು ಸಿರಿಯಾಳನಾಗಿ ಮಾರ್ಪಡಿಸುತ್ತಾರೆ. ಓದುಪಠ್ಯಕ್ಕೆ ಇದು ಅಗತ್ಯವಿಲ್ಲ. ಶ್ರವ್ಯಕಾವ್ಯದಲ್ಲಿ ಈ ಕತೆ ದುಃಖ ಪ್ರಧಾನ ಕತೆಯಾದ್ದರಿಂದ ಅದರಲ್ಲೂ ಹೆಂಗಳೆಯರಿಗೆ ಇಷ್ಟವಾದ್ದರಿಂದ ಕಲಾವಿದರು ಕಡ್ಡಾಯವಾಗಿ ಇದನ್ನು ಹಾಡುತ್ತಾರೆ. ಆದರೆ 'ಓದುಪಠ್ಯ'ವಾಗಿ ರೂಪಿಸುವಾಗ ಇದರ ಅನಿವಾರ್ಯತೆ ಬರುವುದಿಲ್ಲ. ಇದು ಆ ಪಠ್ಯಗಳ ಚರಿತ್ರೆ ಅರಿಯುವುದಕ್ಕೆ ಧಕ್ಕೆಯಾಗುತ್ತವೆ. ಕಲಾವಿದನ ಪ್ರಕಾರ ಅಲ್ಲಮ ಮಂಟೇ ಸ್ವಾಮಿಗಳು ಅಭಿನ್ನರು ಮೌಖಿಕ ಪಠ್ಯಕ್ಕೆ ಒಂದು ಕಾಲಾತೀತ ಚಲನೆ ಸಾಧ್ಯ ಅದು ಮೌಖಿಕ ಪಠ್ಯದ ಲಕ್ಷಣ. ಮಂಟೇಸ್ವಾಮಿ ಕಾವ್ಯದ ಮೊದಲ ಸಂಪಾದಕರು, ಕರ್ನಾಟಕದಲ್ಲಿ ಜನಪದ ಸಾಹಿತ್ಯ ಅಧ್ಯಯನಕ್ಕೆ ನಾಂದಿ ಹಾಡಿದ ಪ್ರೊ. ಜೀ.ಶಂ.ಪರಮಶಿವಯ್ಯನವರು ಮಂಟೇಸ್ವಾಮಿಗಳ ಕಾಲವನ್ನು ಗುರುತಿಸುವಲ್ಲಿ ಗೊಂದಲಕ್ಕೆ ಒಳಗಾಗಬೇಕಾಯಿತು.

ಮಂಟೇಸ್ವಾಮಿ ಮಹಾಕಾವ್ಯದಲ್ಲಿ ಪುನಾರಾವರ್ತನೆಯಾಗುವ ಅನೇಕ ವರ್ಣನೆಗಳು ಇವೆ. ಇದನ್ನು ಕಲಾವಿದ ಆಯಾಯ ಪ್ರಸಂಗಗಳಲ್ಲಿ ಹಾಡುವುದು ಅನಿವಾರ್ಯ. ಉದಾಹರಣೆಗೆ

ಕಥಾನಾಯಕರ ಬಿರುದುಗಳ ವರ್ಣನೆ, ಜಂಗಮರ ವರ್ಣನೆ, ಪಂಚಾಳರ ಸಿರಿವಂತಿಕೆಯ ವರ್ಣನೆ, ಕಲಿಗಾಲದ ವಿಚಿತ್ರತೆಯ ವರ್ಣನೆ, ಮಾರಿಯರ ರೂಪುರೇಷಗಳ ವರ್ಣನೆ, ಗ್ರಾಮದೇವತೆಗಳ ಹೆಸರುಗಳ ವರ್ಣನೆ, ಒಂದು ಊರಿನಿಂದ ಮತ್ತೊಂದು ಊರಿಗೆ ಹೋಗುವಾಗ ಮಾರ್ಗ ಮಧ್ಯದಲ್ಲಿ ಸಿಗುವ ಊರುಗಳು ವರ್ಣನೆ, ಭೌಗೋಳಿಕ ಪರಿಸರದ ವರ್ಣನೆ, ನಾಯಕರು ಭಂಗಿ ಸೇವನೆಗೆ ಬಳಸುವ ಪರಿಕರಗಳ ವರ್ಣನೆ, ಪೂಜೆಗೆ ಬಳಸುವ ಹೂವುಗಳ ವರ್ಣನೆ, ಕಾಳಿಂಗನ ಕಲ್ಲು ಗವಿಯಲ್ಲಿರುವ ಪ್ರಾಣಿಗಳ ವರ್ಣನೆ, ಶಿಷ್ಯರಿಗೆ ದೀಕ್ಷೆ ಕೊಡುವಾಗ ಮಾಡುವ ಆಚರಣೆಗಳ ವರ್ಣನೆ, ಶವಸಂಸ್ಕಾರದ ವರ್ಣನೆ, ಇತ್ಯಾದಿ ಇವುಗಳನ್ನು ಓದುಪಠ್ಯಕ್ಕೆ ಅನಿವಾರ್ಯವಾದ ಕಡೆ ಮಾತ್ರ ಬಳಸಿದ್ದೇನೆ. ಕಾವ್ಯಾತ್ಮಕವಾಗಿರುವ ಸಾಲುಗಳನ್ನು ಬೇರೆ ಬೇರೆ ಪಠ್ಯಗಳಿಂದ ಹೆಕ್ಕಿ ಅವುಗಳ ಬಂಧ ಕೆಡದ ಹಾಗೆ ೧೪ ಪ್ರಸಂಗಗಳಲ್ಲಿ ಸೇರಿಸಿದ್ದೇನೆ.

ಓದುಪಠ್ಯಕ್ಕೆ ಹೆಚ್ಚು ಸೂಕ್ತವಾದದ್ದು ಮೋಳೆ ರಾಜಣ್ಣನ ಹಾಡಿದ ಪಠ್ಯ. ಅದನ್ನು ಹೆಚ್ಚು ಕಡೆ ಬಳಸಿದ್ದೇನೆ. ಮಳವಳ್ಳಿ ಗುರುಬಸವಯ್ಯನ ಪಠ್ಯದಲ್ಲಿ ಸಿದ್ಧಪ್ಪಾಜಿ ಪವಾಡದ ಭಾಗ ಚೆನ್ನಾಗಿ ಮೂಡಿ ಬಂದಿದೆ. ಅದನ್ನು ರಾಜಣ್ಣನ ಪಠ್ಯದ ಜೊತೆ ಬೆರಸಿ ಕಟ್ಟಿದ್ದೇನೆ. ಜಗತ್ ಸೃಷ್ಟಿಯ ಸಾಲು ಕೆಬ್ಬೇಪುರದ ರಾಚಯ್ಯನವರ ಕೊಡುಗೆ. ತಲಕಾಡಿ ಸಿದ್ದಯ್ಯನವರ ಪಠ್ಯ ಕಾವ್ಯಾತ್ಮಕವಾಗಿ ತುಂಬಾ ಶ್ರೇಷ್ಠವಾದ ಪಠ್ಯ. ಅದರಲ್ಲೂ ಆಚರಣೆಗಳು ಕಣ್ಣಮುಂದೆ ನಡೆಯುವಂತೆ ವರ್ಣಿಸಿದ್ದಾರೆ. ಸಖರಾಯಪಟ್ಟಣದ ಸಾಲಿನಲ್ಲಿ ಸತ್ತ ಮಗುವನ್ನು ಒಪ್ಪ ಮಾಡುವ ಆಚರಣೆಯನ್ನು ಮತ್ತು ಸಿದ್ಧಪ್ಪಾಜಿಗೆ ಕಂಕಣ ಕಟ್ಟುವ ಕತೆಯನ್ನು ರಾಜಣ್ಣನ ಪಠ್ಯದೊಡನೆ ಬೆರಸಿ ಕೊಟ್ಟಿದ್ದೇನೆ. ಇನಕಲ್ಲು ಮಹಾದೇವಯ್ಯನ ಪಠ್ಯ ಎಲ್ಲ ಪಠ್ಯಗಳಿಗಿಂತಲೂ ಬೃಹತ್ ಪಠ್ಯ. ಮಹಾದೇವಯ್ಯನವರಿಗೆ ಸಮಗ್ರ ಕತೆ ಮತ್ತು ಹುಟ್ಟು ಕತೆ ಗೊತ್ತಿದೆ. ಆದರೆ ಪುನರುಕ್ತಿಗಳಿಂದ ಗದ್ಯ ಪದ್ಯಗಳ ವಿಂಗಡನೆ ಸರಿಯಿಲ್ಲದೆ ಕಾವ್ಯ ಓದಿಸಿಕೊಂಡು ಹೋಗುವ ಶಕ್ತಿ ಕುಂದಿದೆ. ಈ ಪಠ್ಯದಿಂದ ಕೆಲವು ನುಡಿಗಟ್ಟುಗಳನ್ನು ಮಾತ್ರ ಬಳಸಿಕೊಂಡಿದ್ದೇನೆ. ಇಷ್ಟೆಲ್ಲಾ ಬಳಕೆಯಾದರು ಪಠ್ಯ ನೂರೊಂದು ಪುಟಗಳಲ್ಲಿ ಮುಗಿದದ್ದು ನನಗೆ ಖುಷಿಕೊಟ್ಟಿದೆ.

ಕಲಾವಿದರು ಅಕ್ಷರಸ್ಥರಾಗಿರಲೀ, ಅನಕ್ಷರಸ್ಥರಾಗಿರಲೀ ಕತೆಯನ್ನು ನೆನಪಿನಲ್ಲಿ ಇಟ್ಟುಕೊಳ್ಳುವುದಕ್ಕೆ ಒಬ್ಬೊಬ್ಬ ಕತೆಗಾರ ಒಂದೊಂದು ತಂತ್ರ ಬಳಸುತ್ತಾನೆ. ರಾಜಣ್ಣ ವ್ಯಕ್ತಿನಾಮ, ಸ್ಥಳನಾಮಗಳನ್ನು ಬಳಸುತ್ತಾ ಕತೆಗೆ ಚಾಲನೆ ಕೊಡುತ್ತಾರೆ. ಜಲಜಾಂಬವಂತನನ್ನು ಸಂಹರಿಸಿ ಧರೆ ತಂದದಕಾ ಧರೆಗೆ ದೊಡ್ಡವರು ಎಂದಾಗ **'ಜಗತ್ತು ಸೃಷ್ಟಿಯ ಸಾಲು'**, ಮೈಸೂರಿನಲ್ಲಿ ಮಾಗುರು ಎಂದಾಗ **'ದೊಡ್ಡಮ್ಮತಾಯಿ ಪಡೆದ ಸಾಲು'**, ಘನ ಗಾರುಡಿಗರ ಗಂಡ ಎಂದಾಗ **'ವಿಜಯನಗರದ ಸಾಲು'**, ಕಲ್ಲೂರು ಎಂದಾಗ **'ಕಲಿಸಾರಿದ ಸಾಲು'** ಕಾಳಿಂಗನ ಕಲ್ಲುಗವಿ ಎಂದಾಗ **'ಕೆಂಪಾಚಾರಿಯನ್ನು ಸಿದ್ಧಪ್ಪಾಜಿ ಮಾಡಿದ ಸಾಲು'** ರಾಜಣ್ಣನ ಭಾವಕೋಶಕ್ಕೆ ತಟ್ಟನೆ ಬಂದು ಬಿಡುತ್ತಿದ್ದವು. ಇನ್ನು ತಲಕಾಡು ಸಿದ್ದಯ್ಯನವರ ಪಠ್ಯ

ಗಮನಿಸಿದಾಗ ಅವರು ಆಚರಣೆಗಳ ಮೂಲಕ ನೆನಪಿನಲ್ಲಿ ಇಟ್ಟುಕೊಳ್ಳುವ ತಂತ್ರ ಬಳಸುತ್ತಾರೆ. ಮಳವಳ್ಳಿ ಗುರುಬಸವಯ್ಯ, ಕೆಬ್ಬೇಪುರದ ರಾಚಯ್ಯ, ಇನಕಲ್ಲು ಮಹಾದೇವಯ್ಯನವರು ನೆನಪಿನಲ್ಲಿಟ್ಟುಕೊಳ್ಳುವ ತಂತ್ರ ಯಾವುದು ಎಂಬುದನ್ನು ಇನ್ನೂ ಅಭ್ಯಾಸ ಮಾಡಬೇಕಾಗಿದೆ.

ಶಾಸ್ತ್ರೀಯ ಭಾಷಾ ಯೋಜನೆಯಲ್ಲಿ ಈ ಕೆಲಸವನ್ನು ಮಾಡುವುದಕ್ಕೆ ಅನುಮತಿ ನೀಡಿದ ಕನ್ನಡ ವಿಶ್ವವಿದ್ಯಾಲಯದ ಮಾನ್ಯ ಕುಲಪತಿಗಳಾದ ಪ್ರೊ. ಎ. ಮುರಿಗೆಪ್ಪನವರಿಗೆ ಮೊದಲಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ವಿಶ್ವವಿದ್ಯಾಲಯದ ಮಾನ್ಯ ಕುಲಸಚಿವರಾದ ಪ್ರೊ. ಮಂಜುನಾಥ ಬೇವಿನಕಟ್ಟೆಯವರಿಗೆ, ಪ್ರಸಾರಾಂಗದ ನಿರ್ದೇಶಕರಾದ ಪ್ರೊ. ಎ. ಸುಬ್ಬಣ್ಣ ರೈ ಅವರಿಗೆ, ಮಂಟೇಸ್ವಾಮಿ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಶ್ರೀ ಪ್ರಭುದೇವರಾಜ್ ಅರಸ್ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀ ಸುಜ್ಞಾನಮೂರ್ತಿ ಮತ್ತು ಕಲಾವಿದ ಶ್ರೀ ಕೆ.ಕೆ. ಮಕಾಳಿ ಅವರಿಗೆ ಕೃತಜ್ಞತೆ ಸಲ್ಲಿಸುತ್ತೇನೆ. ಈ ಯೋಜನೆಯನ್ನು ರೂಪಿಸುವಲ್ಲಿ ಹಗಲಿರುಳು ನನ್ನ ಜೊತೆ ಇದ್ದ ವಿದ್ಯಾರ್ಥಿ ಮಿತ್ರ ಡಾ. ಸುದೀಪ್, ದೇಸಿ ಸಂಸ್ಕೃತಿ ಅಧ್ಯಯನ ಕೇಂದ್ರದ ಸಿಬ್ಬಂದಿಗಳಾದ ಶ್ರೀ ನಿಂಗಪ್ಪ, ಶ್ರೀ ಪ್ರಕಾಶ್ ಇವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**ಡಾ. ವೆಂಕಟೇಶ ಇಂದ್ವಾಡಿ**

# ಪ್ರಸ್ತಾವನೆ

## ಪೂರ್ವ ಭೂಮಿಕೆ

ಹನ್ನೆರಡನೇ ಶತಮಾನದ ಅಲ್ಲಮ, ಬಸವಣ್ಣ ಮುಂತಾದ ಶರಣರ ಕಲ್ಯಾಣದ ಕ್ರಾಂತಿಯನ್ನೇ ಹೋಲುವ ಮತ್ತೊಂದು ಕ್ರಾಂತಿ ಹದಿನೈದನೇ ಶತಮಾನದಲ್ಲಿ ಮಂಟೇಸ್ವಾಮಿಗಳ ನಾಯಕತ್ವದಲ್ಲಿ ನಡೆದಿದೆ ಎಂಬುದು ಕಳೆದ ಹತ್ತು ವರ್ಷಗಳ ಮೌಖಿಕ ಮಹಾಕಾವ್ಯಗಳ ಅಧ್ಯಯನ, ಕೊಡೇಕಲ್ಲು ಬರಹ ಸಾಹಿತ್ಯ, ಜೈನ, ವೀರಶೈವ ಪ್ರಾಚೀನ ಸಾಹಿತ್ಯದಿಂದ ಸ್ಪಷ್ಟವಾಗಿದೆ. ಈ ತರಹದ ಪರಂಪರೆಯೊಂದು ಉಗಮವಾಗಲು ಸುಮಾರು ಮುನ್ನೂರು ವರ್ಷಗಳ ಕಾಲ ಅನೇಕ ಸಂಘರ್ಷಗಳು ನಡೆದಿವೆ. ಮಂಟೇಸ್ವಾಮಿ ಪರಂಪರೆಯ ಉಗಮಕ್ಕೆ ಕಾರಣವಾದ ಪೂರ್ವ ಭೂಮಿಕೆ ಯಾವುದು ಎಂಬುದನ್ನು ಮೊದಲಿಗೆ ಗುರುತಿಸಬೇಕಾಗಿದೆ.

ಮಲ್ಲಿಕಾಫರನ ದಾಳಿ, ಹೊಯ್ಸಳ ಸಾಮ್ರಾಜ್ಯದ ಪತನ, ವಾರಂಗಲ್ಲಿನ ಕಾಕತೀಯರು ಮುಂತಾದ ರಾಜಮನೆತನಗಳ ಅಳ್ವಿಕೆಯ ನಂತರ ೧೩೩೬ರಲ್ಲಿ ಹಕ್ಕಬುಕ್ಕರು ವಿಜಯನಗರದಲ್ಲಿ ಹಿಂದೂ ಸಾಮ್ರಾಜ್ಯ ಸ್ಥಾಪಿಸಿದರು. ದೊರೆ ಪ್ರೌಢದೇವರಾಯ ವೀರಶೈವನಾಗಿದ್ದು ಇತರ ಧರ್ಮಗಳ ಹಾಗೆ ವಚನಗಳನ್ನೇ ಆಧರಿಸಿ ವೀರಶೈವ ಧರ್ಮವನ್ನು ಪ್ರಭುತ್ವದ ಧರ್ಮವಾಗಿ ಪುನರ್‌ಸ್ಥಾಪಿಸುವುದು ಅವನ ಕಾಲದ ಅನಿವಾರ್ಯತೆಯಾಗಿತ್ತು. ಮುಕ್ತಕಗಳಾಗಿದ್ದ ವೇದಗಳಿಗೆ ಆಗಮಗಳು ಬಂದು ವೈದಿಕ ಧರ್ಮಕ್ಕೆ ಹೇಗೆ ಆಚಾರ ಮಾರ್ಗಗಳನ್ನು ಸೃಷ್ಟಿಸಿತೋ ಅದೇ ಮಾದರಿಯಲ್ಲಿ ವಚನಗಳಿಗೆ ಟೀಕು, ವ್ಯಾಖ್ಯಾನಗಳನ್ನು ಬರೆದು ಅವುಗಳನ್ನು ಷಟ್‌ಸ್ಥಳಗಳಲ್ಲಿ ವಿಂಗಡಿಸಿ ಅಷ್ಟಾವರಣ, ಪಂಚಾಚಾರ ಎಂಬ ಆಚಾರ ಮಾರ್ಗಗಳನ್ನು ಹುಟ್ಟಾಕಿ ವಚನಗಳನ್ನು ವೀರಶೈವ ಧರ್ಮದ ಧಾರ್ಮಿಕ ಕೈಪಿಡಿಗಳಾಗಿ ಮಾರ್ಪಡಿಸಲಾಯಿತು. ಇದಕ್ಕಾಗಿ ಲಕ್ಕಣ ದಂಡೇಶನ ನೇತೃತ್ವದಲ್ಲಿ ನೂರೊಂದು ಯತಿಗಣ ಪರಿಕಲ್ಪನೆಯನ್ನು ಹುಟ್ಟಾಕಿ ವೀರಶೈವ ಧರ್ಮವನ್ನು ಮೂರು ಹಂತದಲ್ಲಿ ಸಾಂಸ್ಥಿಕಗೊಳಿಸುವ ಪ್ರಯತ್ನ ನಡೆಯಿತು.

ಮೊದಲ ಹಂತದಲ್ಲಿ ಪ್ರೌಢದೇವರಾಯನ ಮಂತ್ರಿಯಾಗಿದ್ದ ಲಕ್ಕಣ ದಂಡೇಶ(ಶಿವತತ್ವ ಚಿಂತಾಮಣಿ) ಕರಸ್ಥಲದ ವೀರಣ್ಣೊಡೆಯ(ಇಷ್ಟಲಿಂಗಚರಿತೆ, ಕರಸ್ಥಲದ ವೀರಣ್ಣರ ವಚನಗಳು, ಲಿಂಗಸೂತ್ರದ ವಚನಗಳು) ಕರಸ್ಥಲದ ನಾಗಿದೇವ(ತ್ರಿಪದಿ, ಏಕವಿಶಂತಿ ದೀಕ್ಷಾವಿಧಾನ, ಅಕ್ಷರಚೌಪದಿ) ಗುರುಬಸವ(ಶಿವಾಯೋಗಾಂಗ ಭೂಷಣ, ಸದ್ಗುರು ರಹಸ್ಯ, ಸ್ವರೂಪಾಮೃತ, ಕಲ್ಯಾಣೇಶ್ವರ) ಗುಬ್ಬಿಯಮಲ್ಲಣ(ಗಣಭಾಷಾರತ್ನಮಾಲೆ) ಬತ್ತಲೇಶ್ವರ (ಬತ್ತಲೇಶ್ವರ ಹಾಡುಗಳು) ಮಗ್ಗೆಯಮಾಯಿದೇವನ(ಶಿವಾನುಭವಸೂತ್ರ), ಕಲ್ಲುಮಠದ ಪ್ರಭುದೇವನ

(ಲಿಂಗಾಲೀಲಾವಿಲಾಸ) ಚಾಮರಸ(ಪ್ರಭುಲಿಂಗಲೀಲೆ) ಮುಂತಾದವರು ಚದುರಿಹೋಗಿದ್ದ ವಚನಗಳನ್ನು ಸಂಗ್ರಹಿಸಿ ಸಂಕಲನ ಸಂಪಾದನೆಗಳನ್ನು ಮಾಡಿ ವ್ಯಾಖ್ಯಾನ ಟೀಕು ಬರೆದದ್ದಲ್ಲದೆ ಸ್ವತಂತ್ರ ರಚನೆಗಳನ್ನು ಮಾಡಿದ್ದಾರೆ. ಈ ಶಾಸ್ತ್ರಕಾರರು ವಚನಗಳಿಗೆ ಟೀಕು ವ್ಯಾಖ್ಯಾನಗಳನ್ನು ಬರೆಯುವುದಷ್ಟೇ ಅಲ್ಲದೆ ವಚನಗಳನ್ನು ವೀರಶೈವ ಧರ್ಮದ ಧಾರ್ಮಿಕ ಕೈಪಿಡಿಗಳಾಗಿ ಮಾಡಿ, ಆಚಾರ ಮಾರ್ಗವೊಂದನ್ನು ಸೃಷ್ಟಿ ಮಾಡಿದರು. ಇವರದೆಲ್ಲಾ ಇಂಟಲೆಕ್ಚುವಲ್ ಕೆಲಸ. ಎರಡನೇ ಘಟ್ಟದಲ್ಲಿ ಎರಡು ಶೂನ್ಯ ಸಂಪಾದನೆಗಳು ಬಂದವು. ಮೂರನೇ ಘಟ್ಟದಲ್ಲಿ ಎಡೆಯೂರು ಸಿದ್ಧಲಿಂಗಯತಿಗಳು ಈ ಇಂಟಲೆಕ್ಚುವಲ್ ಮೆಟೀರಿಯಲ್‌ನ್ನು ಆಕ್ಟಿವೇಟ್ ಮಾಡಲು ೭೦೧ ಗಣಂಗಳ ಪರಿಕಲ್ಪನೆಯನ್ನು ತಂದು ನೂರಾರು ಶಿಷ್ಯರೊಡನೆ ಪರಿಷ್ಕಾರಗೊಂಡ ಈ ವಚನಶಾಸ್ತ್ರಗಳನ್ನು ಮಠಗಳಲ್ಲಿ ಪ್ರತಿ ಮಾಡಿಸಿ, ಪಠಣ ಪರಂಪರೆಯನ್ನು ಹುಟ್ಟಾಕಿ, ವೈದಿಕ ಧರ್ಮದ ಹಾಗೆ ವೀರಶೈವಕ್ಕೂ ಒಂದು ಸಾಂಸ್ಥಿಕ ರೂಪ ಕೊಟ್ಟರು.

ಹನ್ನೆರಡನೇ ಶತಮಾನದಿಂದ ಹದಿನೈದನೇ ಶತಮಾನದವರೆಗೆ ಮೌಖಿಕವಾಗೇ ಉಳಿದುಕೊಂಡಿದ್ದ ವಚನಗಳು ಮೊಟ್ಟಮೊದಲು ಶಾಸ್ತ್ರರೂಪಗಳಲ್ಲಿ ಮತ್ತು ಶೂನ್ಯಸಂಪಾದನೆಗಳ ತರ ಕಾವ್ಯರೂಪದಲ್ಲಿ ಬರಹಕ್ಕೆ ಬಂದವು. ಅವುಗಳಿಗೆ ಒಂದು ಧಾರ್ಮಿಕ ಪರಿವೇಷ ಪ್ರಾಪ್ತವಾದದ್ದರಿಂದ ಹನ್ನರಡನೇ ಶತಮಾನದ ವಚನಗಳ ಆಶಯಕ್ಕೂ ಹದಿನೈದನೇ ಶತಮಾನದ ವಚನಗಳ ಆಶಯಕ್ಕೂ ಬದಲಾವಣೆ ಉಂಟಾಯಿತು.

ಈ ತರದ ಒಂದು ಬದಲಾವಣೆಯ ಮತ್ತು ತಿರುಚಲ್ಪಟ್ಟ ಆಶಯದ ವಿರುದ್ಧ ಎದ್ದ ಆಧ್ಯಾತ್ಮಿಕ ದಂಗೆಯೇ 'ಧರೆಗೆ ದೊಡ್ಡವರ ಕತೆ'. ಇದು ಸಂಘಟನಾತ್ಮಕವಾಗಿ ಸಾಮಾಜಿಕವಾಗಿ ಯಶಸ್ವಿಯಾಯಿತು ಎನ್ನುವ ಬಗ್ಗೆ ಯಾವ ಚಾರಿತ್ರಿಕ ದಾಖಲೆಗಳು ಇಲ್ಲ. ಪಟ್ಟಭದ್ರ ಹಿತಾಸಕ್ತಿಗಳು, ಜಾತಿವ್ಯವಸ್ಥೆ, ಬಂಡವಾಳಷಾಹಿ ವ್ಯವಸ್ಥೆ ಇದನ್ನು ದಮನಿಸುವಲ್ಲಿ ಯಶಸ್ವಿಯಾಗಿದೆ. ಆದ್ದರಿಂದ ಕಲಾವಿದರು ಇದನ್ನು ಒಂದು ಆಶಯದ ಕತೆಯಾಗಿ ಹಾಡುವುದರಲ್ಲೇ ತೃಪ್ತರಾಗಿದ್ದಾರೆ. ವಿಚಿತ್ರವೆಂದರೆ ಇದನ್ನು ದಮನಿಸಿದ ಕುಲಶಕ್ತಿಗಳು ಈ ಕತೆಯನ್ನು ಕೇಳಿ ತಮ್ಮ ಪಾಪ ಪರಿಹಾರವಾಯಿತೆಂದು, ನಮ್ಮ ಹರಕೆ ತೀರಿತೆಂದು ಸಮಾಧಾನದಿಂದಲೇ ಕತೆಯನ್ನು ಕೇಳಿ ಅವರಿಗೆ ಆ ದಿನದ ಮರ್ಯಾದೆ ಮಾಡಿ ತಮ್ಮ ಬಂಡವಾಳ ವ್ಯವಸ್ಥೆಯನ್ನು ಮುಂದುವರಿಸಿದ್ದಾರೆ. ಈ ತರದ ಪೂರ್ವಭೂಮಿಕೆಯಲ್ಲಿ ಹುಟ್ಟಿದ ನೀಲಗಾರ ಪರಂಪರೆ ತಮ್ಮ ನಾಯಕನಾದ ಮಂಟೇಸ್ವಾಮಿಯು ಜೀವನ ವಿಧಾನದಲ್ಲಿ ಎದುರಿಸಿದ ಸಂಘರ್ಷಗಳನ್ನು ಪವಾಡಗಳೆಂದು ಕರೆದುಕೊಂಡು ಮೌಖಿಕ ಕಥನವೊಂದನ್ನು ಹುಟ್ಟಾಕಿದೆ.

## ಚಾರಿತ್ರಿಕ ನೆಲೆಗಳು

ಮಂಟೇಸ್ವಾಮಿ ಪರಂಪರೆ ಅರಿಯುವುದಕ್ಕೆ ನಮಗೆ ಇರುವ ಐತಿಹಾಸಿಕ ದಾಖಲೆಗಳು ವೀರಸಂಗಯ್ಯನ 'ನಂದಿಯಾಗಮಲೀಲೆ', ಕೊಡೇಕಲ್ಲು ಬಸವಣ್ಣನ 'ವಚನವಾಕ್ಯ'ಗಳು,

ಅನಾಮಧೇಯ ಕವಿಯ 'ಷಟ್‌ಸ್ಥಳ ಶಿವಾಯಣ' ದೇವಚಂದ್ರನ 'ರಾಜಾವಳಿಕತೆ' ಮತ್ತು ಮುಟ್ಟನಳ್ಳಿ ಶಾಸನಗಳು. ಇವೆಲ್ಲಗಳ ಆಧಾರದ ಮೇಲೆ ಮಂಟೇಸ್ವಾಮಿ ೧೫ನೇ ಶತಮಾನದ ಉತ್ತರಾರ್ಧದಲ್ಲಿ ಜೀವಿಸಿದ್ದ ಚಾರಿತ್ರಿಕ ವ್ಯಕ್ತಿ ಎಂಬುದು ಧೃಡಪಟ್ಟಿದೆ. ನೀಲಗಾರರು ಹಾಡುವ ಮಂಟೇಸ್ವಾಮಿ ಕಾವ್ಯದಲ್ಲಿ ಹನ್ನೆರಡನೇ ಶತಮಾನದ ಅಲ್ಲಮನೊಡನೆ ಮಂಟೇಸ್ವಾಮಿ ಯನ್ನು ಸಮೀಕರಿಸಿದ್ದರಿಂದ ಹದಿನೈದನೇ ಶತಮಾನದ ಕೊಡೇಕಲ್ಲು ಬಸವಣ್ಣ, ಕಲ್ಯಾಣದ ಬಸವಣ್ಣ ಅಭಿನ್ನರು ಎಂದು ಭಾವಿಸಿದ್ದರಿಂದ, ಎಪ್ಪತ್ತರ ದಶಕದ ಜನಪದ ಅಧ್ಯಯನಕಾರರಿಗೆ ಗೊಂದಲ ಉಂಟಾಗಿತ್ತು. ಇದು ಹನ್ನೆರಡನೇ ಶತಮಾನದ ಅಲ್ಲಮನ ಜನಪದ ಕತೆ ಎಂಬ ನಿಲುವಿಗೆ ಬಂದಿದ್ದರು.

ಮೂಲತಃ ದ್ರವಿಡ ದೇಶದವರಾದ ಮಂಟೇಸ್ವಾಮಿಗಳ ತಂದೆ, ತಾಯಿ, ಜಾತಿ, ಬಾಲ್ಯ ಇತರ ಪೂರ್ವಾಶ್ರಮಗಳ ಬಗ್ಗೆ ಇದುವರೆಗೂ ತಿಳಿದುಬಂದಿಲ್ಲ. ದಕ್ಷಿಣದ ಗುರುಬಾರಲಿಂಗಯ್ಯ ಎನ್ನುವ ಗುರುವಿನ ಆಶ್ರಯದಲ್ಲಿ ಬೆಳೆದ ಮಂಟೇಸ್ವಾಮಿಗಳು ತನ್ನ ಗುರು ಪ್ರಾಣ ಬಿಡುವ ಸಂದರ್ಭದಲ್ಲಿ 'ಕಾಯಸಿದ್ಧಿಗಾಗಿ ಕೊಡೇಕಲ್ಲಿಗೆ ಹೋಗು' ಎಂದು ಹೇಳಿ ಪ್ರಾಣ ತ್ಯಾಗ ಮಾಡುತ್ತಾರೆ. ಈ ಪ್ರಸಂಗ ಶೂನ್ಯಸಂಪಾದನೆಯಲ್ಲಿ ಬರುವ ಅಲ್ಲಮ ಮತ್ತು ಅನಿಮಿಷರ ಭೇಟಿಯ ಪ್ರಸಂಗದಂತೆಯೇ ಇದೆ.

ಗುರುವಿನ ಆಜ್ಞೆಯ ಮೇರೆಗೆ ಕೊಡೇಕಲ್ಲಿಗೆ ಹೋದ ಮಂಟೇಸ್ವಾಮಿಗಳು ಅಲ್ಲಿ ಕೆಲ ಕಾಲವಿದ್ದು ಕಾಯಸಿದ್ಧಿಯನ್ನು ಪಡೆದು ಕೊಡೇಕಲ್ಲು ಬಸವಣ್ಣನ ಮಗನಾದ ರಾಚಪ್ಪಾಜಿ, ಅವರ ಧರ್ಮಪತ್ನಿ ದೊಡ್ಡಮ್ಮ(ನೀಲಮ್ಮ) ತಾಯಿಯೊಡನೆ, ನದಿ ದಾರಿಗಳ ಮೂಲಕ ಸಿದ್ಧ ಕ್ಷೇತ್ರಗಳನ್ನು ಸಂದರ್ಶಿಸುತ್ತಾ ಹಾದಿ ಮಧ್ಯದಲ್ಲಿ ಸಿಸುಮಕ್ಕಳನ್ನು ಒಕ್ಕಲಿನವರನ್ನು ಪಡೆದು ಬಹು ದೀರ್ಘವಾದ ಒಂದು ಸಾಂಸ್ಕೃತಿಕ ಯಾತ್ರೆಯನ್ನು ಮಾಡುತ್ತಾರೆ. ಅದರ ವಿವರವನ್ನು ಈ ಕೆಳಕಂಡಂತೆ ನಕ್ಷೆಯಲ್ಲಿ ಕೊಡಲಾಗಿದೆ.

| ಊರು | ನದಿ | ಸಿದ್ಧರು, ಕ್ಷೇತ್ರಗಳು | ಒಕ್ಕಲು | ಹನುಮಂತನಗುಡಿ | ಜಿಲ್ಲೆ |
|---|---|---|---|---|---|
| ಕೊಡೇಕಲ್ಲು | ಕೃಷ್ಣ-ದೋಣೆ | ಕೊಡೇಕಲ್ಲು-ಬಸವಣ್ಣ ರಾಚಪ್ಪಯ್ಯ | ಜಾಡರು, ಕುರುಬರು ನೇಕಾರರು, ಮಹಲಿನ ಮಠದವರು | ಕೊಡೇಯ ಕಲ್ಲೆಂಬುದು ನೆಲೆ ಹನುಮನಾಶ್ರಯವು (ಸಂ.ಆ.ಲೀ) | ಗುಲಬರ್ಗಾ |
| ಕೆಲೂರು | ಮಲಪ್ರಭಾ | ಸಿದ್ದನಕೊಳ್ಳ, ಇಲ್ಲಕಲ್ಲು ಚಿತ್ತರಗಿಪೀಠ | ಕೊಪ್ಪದವರು (ಕುರುಬರು) ನಾಡಗೌಡರ ಮನೆತನ | ಏಳು ಹನುಮನ ಗುಡಿಗಳು | ಬಾಗಲಕೋಟೆ |
| ಕೂಡಲಸಂಗಮ | ಕೃಷ್ಣಾ-ಮಲಪ್ರಭಾ | ಸಂಗಯ್ಯ | ಸಾರಂಗಮಠ ಜಂಗಮರು | | |
| ಹಂಪಿ | ತುಂಗಭದ್ರಾ | ಎಮ್ಮೆ ಬಸವ | ಸಾರುವಯ್ಯಗಳು | ಇದೆ | ಬಳ್ಳಾರಿ |
| ಹಲವಾಗಲು | ತುಂಗಭದ್ರಾ | ಸಿದ್ದಾಪುರದ ಸಿದ್ಧರು | ಇಲ್ಲ | ಇದೆ | ದಾವಣಗೆರೆ |
| ಕುರುವತ್ತಿ | ತುಂಗಭದ್ರಾ | ಸಿದ್ದಾಪುರದ ಸಿದ್ಧರು | ಮಂಟೇಪ್ಪನ ಒಕ್ಕಲು | ಇಲ್ಲ | ದಾವಣಗೆರೆ |
| ಕಾಗಿನೆಲೆ | ವರದಾ | ಕನಕದಾಸರು | ಕುರುಬರು, ಕಟಗಿ ಮನೆತನ ಮತ್ತು ಮುಸಲ್‌ಮಾನರು | ಇದೆ | ಹಾವೇರಿ |
| ಬಳ್ಳಿಗಾವಿ | ವರದಾ | ಗೊಗ್ಗಯ್ಯ | ಇಲ್ಲ | ಇಲ್ಲ | ಶಿವಮೊಗ್ಗ |
| ಉಡುತಡಿ | ವರದಾ | ಗೊಗ್ಗಯ್ಯ | ಇಲ್ಲ | ಇಲ್ಲ | ಶಿವಮೊಗ್ಗ |

| | | | | | |
|---|---|---|---|---|---|
| ಬನವಾಸಿ (ರಾಚಪ್ಪಯ್ಯನ ಗದ್ದುಗೆ) | ವರದಾ | ಗೊಗ್ಗಯ್ಯ | ಇಲ್ಲ | ಇಲ್ಲ | ಶಿವಮೊಗ್ಗ |
| ಸಖರಾಯಪಟ್ಟಣ | ವೇದಾವತಿ | ಇಲ್ಲ | ಅರಸು ಮನೆತನ | ಗೊತ್ತಿಲ್ಲ | ಚಿಕ್ಕಮಗಳೂರು |
| ಮೈಸೂರು | ಕಾವೇರಿ | ಇಲ್ಲ | ಮೈಸೂರು ಒಡೆಯರು (ಕುರುಬರು) | ಇದೆ | ಮೈಸೂರು |
| ಕಪ್ಪಡಿ | ಕಾವೇರಿ | ಇಲ್ಲ | ಕುರುಬರು, ದಲಿತರು | ಇಲ್ಲ | ಮೈಸೂರು |
| ಬೊಪ್ಪೇಗೌಡನ ಪುರ (ಮೂಲ ಗದ್ದುಗೆ) | ಮಾಲಂಗಿಮಡು | ಕುಂದೂರು ಬೆಟ್ಟದ ಸಿದ್ಧರು | ಕುರುಬರು, ಹರಿಜನರು, ಪಂಚಾಲರು, ಗೌಡರು ಅಗಸರು, ಉಪ್ಪಾರರು ಕುಂಬಾರರು, ಮಡಿವಾಳರು | ಇಲ್ಲ | ಮೈಸೂರು |
| ಚಿಕ್ಕಲ್ಲೂರು | ಕಾವೇರಿ | ರೋಣೆಸಿದ್ಧ (ಸಿದ್ದಪ್ಪನ ಬೆಟ್ಟ) | ಕುರುಬರು, ಹರಿಜನರು, ಪಂಚಾಲರು, ಗೌಡರು ಅಗಸರು, ಉಪ್ಪಾರರು ಕುಂಬಾರರು, ಮಡಿವಾಳರು | ಮುತ್ತತ್ತಿರಾಯ | ಮೈಸೂರು |

ತಮ್ಮ ಪೂರ್ವದ ಕಾವೇರಿ ನದಿಯ ಇಕ್ಕೆಲಗಳಲ್ಲಿ ನೆಲೆಯಾಗಿ ನೀಲಗಾರ ಪರಂಪರೆಯನ್ನು ಕಟ್ಟುತ್ತಾರೆ. ಇದನ್ನು ಕತ್ತಲರಾಜ್ಯದ ಕತೆಯೆಂದು ಕರೆದುಕೊಂಡಿದ್ದಾರೆ. ಇದಕ್ಕೆ ಮೈಸೂರು ಒಡೆಯರ ಸಂಬಂಧ, ಕುರುಬ ಬೊಪ್ಪೇಗೌಡನಪುರದ ಸ್ಥಳ, ಹಲಗೂರು ಪಂಚಾಳದವರ ಮಗ ಕೆಂಪಾಚಾರಿಯನ್ನು ಸಿಸುಮಗನಾಗಿ ಪಡೆಯುವುದು, ಮಠಮನೆ ಕಟ್ಟಲು ಹಲಗೂರಿನ ಪಂಚಾಲರಿಂದ ಕಬ್ಬಿಣ್ಣಕ್ಕೆ ಮೊರೆ ಹೋಗುವುದು ಅಂತಿಮವಾಗಿ ಪಾತಾಳ ಬಾವಿಯಲ್ಲಿ ಜೀವಸಮಾಧಿಯಾಗುವಲ್ಲಿ ಕತೆ ಮುಗಿಯುತ್ತದೆ.

ಉತ್ತರ ಕರ್ನಾಟಕದಿಂದ ದಕ್ಷಿಣ ಕರ್ನಾಟಕಕ್ಕೆ ಸುದೀರ್ಘ ಪ್ರಯಾಣ, ದಕ್ಷಿಣದಲ್ಲಿ ನೆಲೆಯಾಗುವಲ್ಲಿ ಮಾಡಿದ ಸಂಘರ್ಷಗಳೇ ನೀಲಗಾರರು ಹಾಡುವ 'ಧರೆಗೆ ದೊಡ್ಡವರ ಕತೆ'ಯಾಗಿದೆ.ಇವಿಷ್ಟು ಚಾರಿತ್ರಿಕ ಸಂಗತಿಗಳು ಬರಹ ಪರಂಪರೆಯಲ್ಲಿದ್ದು ಮೌಖಿಕ ಪರಂಪರೆಯಲ್ಲಿ ಇದು ಅನೇಕ ಪರಿಕಲ್ಪನೆಗಳಾಗಿ ಒಡಮೂಡಿದೆ.

## ಉತ್ತರ ದೇಶದ ಕೈಲಾಸ ಕಲ್ಯಾಣದ ಕತೆಗಳು

ನೀಲಗಾರರು ಧರೆಗೆ ದೊಡ್ಡವರ ಕತೆಯನ್ನು **ಉತ್ತರ ದೇಶದ ಕತೆ, ಕತ್ತಲರಾಜ್ಯದ ಕತೆ** ಎಂದು ಎರಡು ವಿಭಾಗಗಳಾಗಿ ಮಾಡಿಕೊಂಡಿದ್ದಾರೆ. ಈ ವಿಭಾಗೀಕರಣದ ಮೂಲ ಉದ್ದೇಶ ಉತ್ತರ ದೇಶದ ಕತೆ ಕಲ್ಪನೆ, ಫ್ಯಾಂಟಸಿ, ಆಶಯಗಳಿಂದ ಕೂಡಿದೆ. ಇದು ಅವರ ಅನುಭವಕ್ಕೆ ಬಾರದ ಅಲೌಕಿಕ ನೆಲೆಗಳು. ಇಲ್ಲಿ ಕೈಲಾಸ ಮತ್ತು ಕಲ್ಯಾಣ ಎರಡು ಮುಖ್ಯ ಭೂಮಿಕೆಗಳು. ಕಲ್ಯಾಣವೆಂದರೆ ಬೀದರ್ ಜಿಲ್ಲೆಯ ಬಸವ ಕಲ್ಯಾಣವಲ್ಲ. ಇರೆಂಬತ್ತು ಕೋಟಿ ಜೀವರಾಶಿಗಳು, ಕುಲೇಳು ಹದಿನೆಂಟು ಜಾತಿಗಳು ಒಂದಾಗಿ ಬಾಳುವ ಆಶಯದಿಂದ ಹುಟ್ಟಿದ ಬಸವಣ್ಣ ಕಟ್ಟಿದ ಕಲ್ಯಾಣ. ನೀಲಗಾರರು ಕೈಲಾಸದಂತೆ ಕಲ್ಯಾಣವನ್ನು ಪುರಾಣೀಕರಿಸಿದ್ದಾರೆ. ಆದ್ದರಿಂದ ಅಲ್ಲಿ ಅವತಾರಗಳು, ಪರಂಪರೆಯ ಸುಖಿರಾಜ್ಯದ ಕನಸುಗಳು, ಇವೆಲ್ಲಾ ರೂಪಕ, ಪ್ರತಿಮೆಗಳಲ್ಲಿ ವಿಜೃಂಭಿಸುತ್ತವೆ. ಕತೆಯ ಒಟ್ಟು ಸ್ವರೂಪದಲ್ಲಿ ಈ ಭಾಗಗಳು ಪರಿಕಲ್ಪನಾತ್ಮಕವಾದವು. ಮೊದಲ ಭಾಗದಲ್ಲಿ ಜಗತ್ ಸೃಷ್ಟಿಯ ಕತೆ ಬರುತ್ತದೆ. ಈ ಕತೆಗೆ  ಜನಪದ ಕವಿಗಳು ಜಾಂಬವಮುನಿ ಪುರಾಣ, ಶಿಷ್ಟ ಪುರಾಣಗಳಲ್ಲಿ ಬರುವ ಭಸ್ಮಾಸುರನ ಕತೆಯನ್ನು ಎರವಲು ಪಡೆದು ಮಂಟೇಸ್ವಾಮಿಗಳನ್ನು ಧರೆಗೆ ದೊಡ್ಡವರಾಗಿ ಮಾಡಲು ಅವರೇ ಒಂದು ಪುರಾಣ ಪ್ರಸಂಗವನ್ನು ಸೃಷ್ಟಿ ಮಾಡಿದ್ದಾರೆ. ಇದು ಬೇರೆ ಯಾವ ಪುರಾಣ, ಮಹಾಕಾವ್ಯಗಳಲ್ಲಿ ಸಿಗದ ಭಾಗವಾಗಿದೆ. ಮಂಟೇಸ್ವಾಮಿಗಳು ತಮ್ಮ ಹಣೆ ಬೆವರಿನಿಂದ ಕತ್ತಲ ರಾಜ್ಯಕ್ಕೆ ಜ್ಯೋತಿಯನ್ನು ತರುವ ಕತೆ ಕಲಾವಿದರು ಮೂಲತಃ ದುಡಿವ ವರ್ಗದ ಪರ ಎಂಬುದನ್ನು ಸೂಚಿಸುತ್ತದೆ.

ಧರೆಗೆ ದೊಡ್ಡವರ ಕತೆಯ ಕಾಲಾತೀತ ಪ್ರಖರ ವೈಚಾರಿಕತೆಯ ಮಹಾದರ್ಶನವಾಗುವುದು ಉತ್ತರ ದೇಶದ ಕತೆಯ ಕಲ್ಯಾಣದಲ್ಲಿ. ಮಂಟೇಸ್ವಾಮಿಗಳು ಇಲ್ಲಿ ಅಲ್ಲಮರೂಪಿಯಾಗಿ ರೂಪಾಂತರಗೊಂಡು ಕಾವಿ ಕಲ್ಯಾಣವನ್ನು ಬರಿದು(ಖಾಲಿ)ಮಾಡಲು ಕೈಲಾಸದಿಂದ ಕಲ್ಯಾಣಕ್ಕೆ ಬರುತ್ತಾರೆ. ನೀಲಗಾರ ಪರಂಪರೆಯ ಜನಪದ ಕವಿಗಳ ಸ್ಮೃತಿಯಲ್ಲಿ ಹನ್ನೆರಡನೇ ಶತಮಾನದ

ಕಲ್ಯಾಣ ಅಳಿದು ಹೋಗಿಲ್ಲ, ಅದು ಮುನ್ನೂರು ವರ್ಷಗಳ ಚರಿತ್ರೆಯಲ್ಲಿ ಸಾಂಸ್ಥಿಕ ರೂಪ ಪಡೆದು ಬೇರೊಂದು ರೀತಿಯಲ್ಲಿ ಉಳಿದುಕೊಂಡಿದೆ. ಅದನ್ನು ಬರಿದು ಮಾಡಿ ಕಾಯಕ ಜೀವಿಗಳಿಗೆ ವರ್ಗಾಯಿಸುವುದು ಕತೆಯ ಮುಖ್ಯ ತಿರುಳು. ಅದಕ್ಕೆ ಮೊದಲು ಅವರ ಲಿಂಗ ಗಳನ್ನು ಬದನೆಕಾಯಿ ಮಾಡಿಬಿಡುವುದು, ಹೆಂಡದ ಗಡಿಗೆಯಲ್ಲಿ ಇಟ್ಟು ಹುದುಕಾಡುವುದು, ಕೊನೆಗೆ ಒಂಬತ್ತು ಮಂದಿ ಕಾಯಕ ಜೀವಿಗಳಿಗೆ ಲಿಂಗಧಾರಣೆ ಮಾಡಿ ಕಾವಿ ಜಂಗಮರಿಗೆ 'ಕಲ್ಲುವಡ್ಡರಾಗಿ ಗೇಯ್ಕು ತಿನ್ನಿ' ಎಂದು ಶಾಪಕೊಡುತ್ತಾರೆ. ಅಲ್ಲಿದ್ದ ನಿಜ ಶರಣರನ್ನು ನೇರ ಕೈಲಾಸಕ್ಕೆ ಕಳುಹಿಸಿ, ಇನ್ನು ಪಾಪಕರ್ಮ ಮುಗಿಯದ ಶರಣರನ್ನು 'ಮುಂದೆ ಕಲಿಯುಗದಲ್ಲಿ ಜನ್ಮವೆತ್ತಿ' ಎಂದು ಅವತಾರಗಳನ್ನು ನಿರ್ಮಾಣ ಮಾಡುತ್ತಾರೆ. ಆ ಪ್ರಕಾರ ಕಲ್ಯಾಣದ ಕಡೇ ಬಾಗಿಲಲ್ಲಿ ಕಾವಲು ಕಾಯುತ್ತಿದ್ದ ಓಜಿ ಬಸಪ್ಪ ಕಲಿಗಾಲದಲ್ಲಿ ಕೆಂಪಾಚಾರಿಯಾಗಿ ಹುಟ್ಟುತ್ತಾನೆ. ಅವನನ್ನು ಸಿದ್ಧಪ್ಪಾಜಿಯಾಗಿ ಪರಿವರ್ತಿಸುತ್ತಾರೆ. ಅಕ್ಕ ಮಹಾದೇವಿ ದೊಡ್ಡಮ್ಮ ತಾಯಿಯಾಗಿ ಜನ್ಮ ಎತ್ತುತ್ತಾರೆ. ಮಡಿವಾಳ ಮಾಚಯ್ಯ ಫಲಹಾರದಯ್ಯನಾಗಿ ಕಲಿಯುಗದಲ್ಲಿ ಅವತರಿ ಸುತ್ತಾರೆ. ಕಲ್ಯಾಣದ ಹಡಪದ ರೇಚಣ್ಣ ಪಂಕ್ತಿಯಲ್ಲಿ ವಂಚನೆ ಮಾಡಿದಕ್ಕೆ ಕಲಿಯುಗದಲ್ಲಿ ಕಪ್ಪಡಿ ರೇಚಪ್ಪಾಜಿಯಾಗಿ ಅವತರಿಸುತ್ತಾರೆ. ಇಲ್ಲಿಗೆ ಕಲ್ಯಾಣದ ಕತೆ ಮುಗಿಯುತ್ತದೆ. ಇವೆಲ್ಲಾ ನಾಟಕೀಯವಾಗಿದ್ದು ಸ್ವತಃ ಜನಪದ ಕವಿಗಳ ಸೃಷ್ಟಿಯಾಗಿದ್ದು ಬೇರೆ ಯಾವ ಪುರಾಣಗಳಲ್ಲಿ ಸಿಗದ ಅದ್ಭುತ ಜನಪದ ಪುರಾಣಗಳಾಗಿವೆ.

ಉತ್ತರದೇಶದ ಕತೆಯಲ್ಲಿ ಈ ಕಾವ್ಯದ ನಾಯಕರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಚಲಿಸುತ್ತಾ ಅಲ್ಲಿ ಶಿಷ್ಯರನ್ನು ಪ್ರಭಾವಿಸಿ ವಿಕ್ರಯಿಸಿ ದಾಟುವುದನ್ನು ಕಾಣುತ್ತೇವೆ. ಅಂದರೆ ಈ ಚಲನೆಗೆ ಹೋಗಿ ಬರುವ ಲಕ್ಷಣಗಳಿಲ್ಲ. ಒಂದು ಸ್ಥಳವನ್ನು ಸೇರಿದರೆ, ಅಲ್ಲಿ ಕೆಲಕಾಲ ಇದ್ದು ವಿರುದ್ಧ ಶಕ್ತಿಗಳೊಡನೆ ಹೋರಾಡಿ, ಅವರನ್ನು ದೈವಿ ಶಕ್ತಿಯಿಂದ ಗೆದ್ದು, ಶಿಷ್ಯರನ್ನಾಗಿ ಪಡೆದುಕೊಂಡು ತಮ್ಮ ಕುರುಹುಗಳನ್ನು ಉಳಿಸಿ ಅವುಗಳಿಗೆ 'ತೋರು ಗದ್ದುಗೆಗ'ಳೆಂದು ಕರೆದು ಮುಂದೆ ಸಾಗಿದ್ದಾರೆ. ಉತ್ತರದ ಈ ಗಡಿಗಳನ್ನು ದಾಟುವುದು, ಪ್ರಭಾವಿಸುವುದು ಅಂದಿನ ರಾಜಕೀಯ ಸಂದರ್ಭದಲ್ಲಿ ಅಷ್ಟು ಸುಲಭವಾದ ಸಂಗತಿ ಯಾಗಿರಲಿಲ್ಲಾ. ಇದಕ್ಕೆ ಮುಖ್ಯವಾಗಿ ಎರಡು ಶಕ್ತಿಗಳ ಅಗತ್ಯವಿತ್ತು. ಒಂದು ಸೈನ್ಯಬಲದಿಂದ ಯುದ್ಧಮಾಡಿ ಗೆಲ್ಲುವ ರಾಜಕೀಯ ಶಕ್ತಿ ಮತ್ತೊಂದು ಜನಪರವಾದ ನೈತಿಕವಾದ ಆಧ್ಯಾತ್ಮಿಕ ಉನ್ನತಿ. ಮಂಟೇಸ್ವಾಮಿಗಳ ಆಯ್ಕೆ ಎರಡನೆಯದಾಗಿತ್ತು. ಈ ಸಾಂಸ್ಕೃತಿಕ ಚಲನೆಗೆ ನದಿದಾರಿಗಳನ್ನು ಮತ್ತು ಸಿದ್ಧ ಕ್ಷೇತ್ರಗಳನ್ನು ಕೊಂಡಿಗಳ ಹಾಗೆ ಬಳಸಿದ್ದಾರೆ. ಕೈಲಾಸದ ಕತೆಯಲ್ಲಿ ಸೃಷ್ಟಿ, ಕಲ್ಯಾಣದಲ್ಲಿ ಸ್ಥಿತಿ, ಹಾಗೂ ಕಲಿಗಾಲದ ಕತೆಯಲ್ಲಿ ಲಯ ಬರುತ್ತದೆ, ಪುರಾಣ, ಚರಿತ್ರೆ, ವಾಸ್ತವಗಳೆಲ್ಲ ಮೇಳೈಸಿಕೊಂಡು 'ಜನಪದ ಮಹಾಕಾವ್ಯ' ಇದಾಗಿದೆ.

## ಕತ್ತಲ ರಾಜ್ಯದ ಕತೆಯ ಮೂರು ಮುಖ್ಯ ಕ್ರಿಯೆಗಳು

ವಿಜಯನಗರ ಪತನವಾದ ಮೇಲೆ ಕೆಳದಿ ಮತ್ತು ಮೈಸೂರು ಸಂಸ್ಥಾನಗಳು ಪ್ರಧಾನ ರಾಜವಂಶಗಳಾಗಿ ಕಾಣಿಸಿಕೊಂಡರೂ, ಆಯಾಯ ಆಡಳಿತ ಪ್ರದೇಶಗಳಲ್ಲಿದ್ದ ಪಾಳೇಗಾರರು

ಪ್ರಬಲವಾಗಿದ್ದ ಕಾಲವದು. ಕೇಂದ್ರ ಆಡಳಿತ ಏಕೇಂದ್ರೀಕರಣಗೊಂಡು ಜನಪದರು ತಮಗೆ ಹತ್ತಿರವಿದ್ದ ಪಾಳೇಗಾರರ, ನಾಯಕರ ಸಾಮಂತರ ಆಡಳಿತಕ್ರಮ ಜೀವನ ವಿಧಾನವನ್ನು ಗಮನಿಸಿ ಜನಪದ ಮೌಖಿಕ ಕಥನಗಳನ್ನು ಕಟ್ಟಿದ ಕಾಲವೂ ಇದಾಗಿದೆ.

ಉತ್ತರದಿಂದ ತಮ್ಮ ಶಿಷ್ಯಪಡೆಯೊಡನೆ ಬಂದ ಮಂಟೇಸ್ವಾಮಿಗಳು ಮೈಸೂರನ್ನು ತಲುಪಿದಾಗ ಅಂದಿನ ಚಾರಿತ್ರಿಕ ಸಂದರ್ಭ ಪಾಳೇಗಾರರ ಸಾಮಂತದೊರೆಗಳ ಸಂಘರ್ಷದಿಂದ ಕೂಡಿತ್ತು. ಮೈಸೂರು ಪ್ರದೇಶ ಅನೇಕ ಘಟಕಗಳಾಗಿ ಒಡೆದು ಹೋಗಿತ್ತು. 'ಉತ್ತರದಲ್ಲಿ ಬಸವಾಪಟ್ಟಣ, ಬಿದನೂರು ಮತ್ತು ಚಿತ್ರದುರ್ಗ ನಾಯಕರು, ಬೇಲೂರು ನಾಯಕರು, ಪೂರ್ವದಲ್ಲಿ ಹಾಗಲವಾಡಿಯ ನಾಯಕರು, ದಕ್ಷಿಣದಲ್ಲಿ ಉಮ್ಮತ್ತೂರಿನ ಪಾಳೇಗಾರರು ಮತ್ತು ಯಳಂದೂರು ಅರಿಕುಠಾರ(ಚಾಮರಾಜನಗರ)ದಲ್ಲಿ ಹದಿನಾಡ ದೊರೆಗಳು, ಕೊಡಗಿನಲ್ಲಿ ಚೆಂಗಾಳ್ವರು ಆಡಳಿತ ನಡೆಸುತ್ತಿದ್ದರು"(ಶಿವಣ್ಣ.ಕೆ.ಎಸ್, ೧೯೯೭ ಪುಟ-೪೨೮) ಮಂಟೇಸ್ವಾಮಿಗಳು- ರಾಚಪ್ಪಾಜಿಯವರು ಮೈಸೂರಿಗೆ ಬಂದಾಗ ಅದು ರಾಜ ಒಡೆಯರ ಕಾಲ(೧೫೭೮-೧೬೧೭). ಇವನು ಸಹ ಅತ್ಯಂತ ಸೀಮಿತ ಪ್ರದೇಶವನ್ನು ಆಳುತ್ತಿದ್ದ ಸಾಮಂತದೊರೆ. ಕಾರುಗಳ್ಳಿ ಮಾರನಾಯಕನೊಡನೆ ನಡೆಸಿದ ಯುದ್ಧಕ್ಕೆ ರಾಚಪ್ಪಾಜಿ ನೆರವಾಗಿದ್ದಾರೆ.

**ತಳಭಿಕ್ಷೆ**

ಉತ್ತರದಿಂದ ನೂರಾರು ಮೈಲಿ ನಡೆದುಕೊಂಡು ಬಂದ ಈ ಸಾಂಸ್ಕೃತಿಕ ತಂಡ ಕತ್ತಲ ರಾಜ್ಯದಲ್ಲಿ ಅಂದರೆ ಕಾವೇರಿ ನದಿಯ ಇಕ್ಕೆಲಗಳಲ್ಲಿ ನೆಲೆಯಾಗುವ ಪ್ರಕ್ರಿಯೆ ಪ್ರಾರಂಭಿಸುತ್ತದೆ. ಮಠ ಮನೆ ಕಟ್ಟುವುದಕ್ಕೆ ಜಾಗ ಪಡೆಯುವುದನ್ನು ತಳಭಿಕ್ಷವೆಂದು, ಆ ತಳದಲ್ಲಿ ಈ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುವ ಶಿಷ್ಯನನ್ನು ಪಡೆಯು ವುದಕ್ಕೆ ಮಗನ ಭಿಕ್ಷವೆಂದು ಮತ್ತು ಪಾತಾಳ ಬಾವಿಯನ್ನು ತೋಡಿ ಮಠಮನೆ ಕಟ್ಟಲು ಬೇಕಾದ ಕಬ್ಬಿಣವನ್ನು ಪಡೆಯುವುದಕ್ಕೆ ಕಬ್ಬಿಣ ಭಿಕ್ಷವೆಂದು ಕಾವ್ಯದಲ್ಲಿ ಸಾಂಕೇತಿಕವಾಗಿ ಕರೆದುಕೊಂಡಿದ್ದಾರೆ. ಈ ಮೂರು ಕ್ರಿಯೆಗಳನ್ನು ಮಾಡಿ ಕೊನೆಗೆ ಕಲಿಕಂಡು ಕಣ್ಮರೆಯಾಗುವಲ್ಲಿ ಕತ್ತಲ ರಾಜ್ಯದ ಕತೆ ಮುಕ್ತಾಯವಾಗುತ್ತದೆ. ತಳಭಿಕ್ಷೆಗೆ ಬೊಪ್ಪೇಗೌಡನ ಕುರಿದೊಡ್ಡಿಯನ್ನು ಉರಿಗದ್ದುಗೆಯಾಗಿ ಮತ್ತು ಮಡಿವಾಳ ಮಾಚಯ್ಯನ ಕತ್ತೆಕೊಟ್ಟಿಗೆಯನ್ನು ಚಂದ್ರಶಾಲೆಯಾಗಿ ಪಡೆಯುತ್ತಾರೆ. ಇವೆಲ್ಲಾ ರೂಪಕ ಪ್ರತಿಮೆಗಳಿಂದ ಕೂಡಿದ್ದು ಶಿಷ್ಟ ಸಂಸ್ಕೃತಿಯಿಂದ ತಿರಸ್ಕಾರಕ್ಕೆ ಒಳಗಾದ, ಸೂತಕವಾದ ವಸ್ತುಗಳಿಂದಲೇ ಒಂದು ಸಂಸ್ಕೃತಿಯನ್ನು ಕಟ್ಟುವ ಹಠಗಾರಿಕೆ ಇದೆ.

**ಮಗನ ಭಿಕ್ಷೆ**

ಹಲಗೂರು ಪಂಚಾಳದವರ ಏಳನೇ ಮಗನಾದ ಕೆಂಪಾಚಾರಿಯನ್ನು ಪಡೆದು ಅವನನ್ನು ಈ ಪರಂಪರೆಯ ವಾರಸುದಾರನಾಗಿ ಮಾಡುವುದೇ ಮಗನ ಭಿಕ್ಷೆ. ಸಾಂಪ್ರದಾಯಿಕ ಕುಲುಮೆಗಳಿಂದ ಕಬ್ಬಿಣದ ಸಲಕರಣೆಗಳನ್ನು ಮಾಡಿ ಕಬ್ಬಿಣದ ಉದ್ಯೋಗ ಮಾಡುತ್ತಿದ್ದ ಹಲಗೂರಿನ ಪಂಚಾಳದವರು ಆ ಕಾಲದ ಶ್ರೀಮಂತರು ಹಾಗೂ ಸಂಪತ್ತಿನ ಒಡೆಯರಾಗಿದ್ದರು. ಇವರ

ಮನೆತನದ ಮಗನನ್ನು ಶಿಷ್ಯನನ್ನಾಗಿ ಮಾಡಿ ಭಿಕ್ಷೆ ಬೇಡಿಕೊಂಡು ಬದುಕುವಂತೆ ಮಾಡುವ ಒಂದು ಪರಿವರ್ತನಾ ಕ್ರಿಯೆಯ ಕತೆಯೇ ಮಗನ ಭಿಕ್ಷದ ಕತೆ. ಇದಕ್ಕೆ ಕಲಾವಿದರು ಅನೇಕ ತಂತ್ರಗಳನ್ನು ಕಲ್ಪಿಸಿ ಕಟ್ಟಿದ್ದಾರೆ. ಕಲ್ಯಾಣದ ಕತೆಯಲ್ಲೇ ಕೆಂಪಾಚಾರಿ ಪಾತ್ರವನ್ನು ತಂದು ಅವನು ಕಲಿಗಾಲದಲ್ಲಿ ಮಾರಳ್ಳಿ ಮುದ್ದಮ್ಮನ ಹೊಟ್ಟೆಯಲ್ಲಿ ಏಳನೇ ಮಗನಾಗಿ ಹುಟ್ಟಿ ಬರುವಂತೆ ಅವತಾರ ಕೊಡುತ್ತಾರೆ. ಮಾರಳ್ಳಿಯಲ್ಲಿ ಬಡವರಾಗಿದ್ದ ಮುದ್ದಮ್ಮ ದಂಪತಿಗಳು ಇವನು ಏಳನೇ ಮಗನಾಗಿ ಹುಟ್ಟಿದಾಗ ಭಾಗ್ಯ ಬಂದು ಹಲಗೂರಿನಲ್ಲಿ ನೆಲೆಯಾಗಿ ಕಬ್ಬಿಣದ ಉದ್ಯೋಗ ಮಾಡಿ ಶ್ರೀಮಂತರಾಗುತ್ತಾರೆ. ನಂತರ ಈ ಶ್ರೀಮಂತಿಕೆಗೆ ಕಾರಣರಾದ ಮನೆ ದೇವರಾದ ಮಂಟೇಸ್ವಾಮಿಗಳನ್ನು ಮರೆಯುತ್ತಾರೆ. ಆಗ ಮಂಟೇಸ್ವಾಮಿಗಳು ಬಂದು ಮಗನನ್ನು ಭಿಕ್ಷೆ ಕೇಳುವುದು, ಇವರು ನಿರಾಕರಿಸುವುದು, ಅವನನ್ನು ಕಾಳಿಂಗನ ಕಲ್ಲುಗವಿಗೆ ನೂಕುವುದು. ಅಲ್ಲಿ ಅವನು ಹನ್ನೆರಡು ವರ್ಷ ತಪಸ್ಸು ಮಾಡಿ ಸಿದ್ದಪ್ಪಾಜಿಯಾಗಿ ಬದಲಾವಣೆ ಯಾಗುವುದು ಇವೆಲ್ಲಾ ಅತ್ಯಂತ ರೋಚಕವಾಗಿ ಮೂಡಿ ಬಂದಿದೆ.

**ಕಬ್ಬಿಣ ಭಿಕ್ಷ**

ಕಬ್ಬಿಣ ಭಿಕ್ಷ ಎನ್ನುವುದೇ ಒಂದು ಉತ್ಪಾದನ ಚಟುವಟಿಕೆಯನ್ನು ಸಾಂಕೇತಿಸುತ್ತಿದೆ. ಈ ಭಿಕ್ಷೆಯನ್ನು ಪಡೆಯುವ ಮೂಲಕ ಒಂದು ಆರ್ಥಿಕ ರಚನೆಯನ್ನು ಬದಲಾಯಿಸುವ ಆಶಯವಿದೆ. ಆ ಕಾಲದ ಸಂಪತ್ತಿನ ಒಡೆಯರಾಗಿದ್ದ ಹಲಗೂರು ಪಾಂಚಾಳದವರು ಸಾಂಪ್ರದಾಯಿಕ ಕುಲುಮೆಗಳಲ್ಲಿ ಕಬ್ಬಿಣವನ್ನು ಉತ್ಪಾದನೆ ಮಾಡಿ ಶ್ರೀರಂಗಪಟ್ಟಣವನ್ನು ರಾಜಧಾನಿಯಾಗಿ ಮಾಡಿಕೊಂಡಿದ್ದ ಮೈಸೂರು ಒಡೆಯರಿಗೆ ಯುದ್ಧ ಸಲಕರಣೆಯನ್ನು ಮಾಡಿಕೊಟ್ಟು ಶ್ರೀಮಂತರಾಗಿದ್ದರು. ಯುದ್ಧ ಸಲಕರಣೆಗಳ ತಯಾರಿಕೆ ಬಿಟ್ಟು ಅವರು ವ್ಯವಸಾಯ ಸಾಮಾಗ್ರಿಗಳನ್ನು ಮಾಡಿ ಜನಪರವಾಗಬೇಕು ಎಂಬ ಆಶಯದ ಕತೆಯೇ 'ಕಬ್ಬಿಣ ಭಿಕ್ಷ'ದ ಕತೆ.(ಮಂಟೇಸ್ವಾಮಿ ಪರಂಪರೆ ಕೃತಿಯಲ್ಲಿ ಸುದೀರ್ಘವಾದ ಮಾಹಿತಿ ಇದೆ ಗಮನಿಸಿ)

ನೀಲಗಾರರು ಹಾಡುವ 'ಕಲಿಸಾರುವ ಕತೆ' ಈ ಪರಂಪರೆಯ ಸೋಲಿನ ಅಸಹಾಯಕತೆ ಮತ್ತು ಎಲ್ಲ ಕಾಲಕ್ಕೂ ಅನ್ವಯಿಸುವ ದೇಶ ಕಾಲಾತೀತವಾದ ಮನುಷ್ಯನ ಆಸೆಯ ದುರಂತಗಳು ಮತ್ತು ಅದಕ್ಕೆ ಬಲಿಯಾದ ಸಮುದಾಯಗಳ ಕತೆಯಾಗಿದೆ.

ಹದಿನೈದನೇ ಶತಮಾನದ ಸಂತನೊಬ್ಬನ ಈ ತರದ ಜೀವನ ವಿಧಾನ ಯಾವ ಕಾಲ ಘಟ್ಟದಲ್ಲಿ ಮೌಖಿಕ ಕಥನವಾಗಿ ಮಾರ್ಪಟ್ಟಿತು ಎಂಬುದಕ್ಕೆ ನಮಗೆ ಐತಿಹಾಸಿಕ ದಾಖಲೆಗಳು ಇಲ್ಲ. ಆದರೆ ೧೨ನೇ ಶತಮಾನದ ಬಸವಣ್ಣನ ಜೀವನವನ್ನು ಕತೆಯಾಗಿಸಿದ, ಹಾಡುವ ಕುಲದವರೇ ಮುಂದೆ ಮಂಟೇಸ್ವಾಮಿಯವರ ಜೀವನ ವಿಧಾನವನ್ನು ಕತೆಯಾಗಿಸಿರಬಹುದು. ಹಾಡುವುದನ್ನೇ ವೃತ್ತಿಯಾಗಿಸಿಕೊಂಡಿದ್ದ ಮಂಟೇದರಿಂದ ಹುಟ್ಟಿದ ಈ ಕತೆ ನಂತರ ಬೇರೆ ಬೇರೆ ಕೆಳವರ್ಗದ ಕಲಾವಿದರ ಕಥನವಾಗಿ ಅವರ ಜೀವನ ನಿರ್ವಹಣೆಗೂ ಸಹಾಯ ಮಾಡಿದೆ. ಇವರು ಕಾಲಜ್ಞಾನವನ್ನು ಸಾರುವುದು, ಒಕ್ಕಲಿನವರ ಸಾಂಸ್ಕೃತಿಕ ನಾಯಕರ ಜೀವನವನ್ನು

ಕತೆಯಾಗಿ ಹಾಡುವುದು, ಆ ಮೂಲಕ ಒಕ್ಕಲಿನವರಿಂದ ದವಸ ಧಾನ್ಯಗಳನ್ನು ಪಡೆದು ಉಪಜೀವನ ಸಾಗಿಸುವುದು ಅವರ ಕುಲ ಕಸುಬಾಗಿತ್ತು. ಮಂಟೇದರು ಎನ್ನುವ ಹಾಡುವ ಕುಲದವರು ಕರಿಕೋಟುಗಳನ್ನು ಧರಿಸಿಕೊಂಡು, ತಲೆಗೆ ಮುಂಡಾಸುಗಳನ್ನು ಸುತ್ತಿಕೊಂಡು ಕೈಯಲ್ಲಿ ಗೋಜಲ ಹಕ್ಕಿಗಳ ಗೂಡುಗಳನ್ನು ಹಿಡಿದುಕೊಂಡು ಈ ಕಥನಗಳನ್ನು ಹಾಡುವುದಕ್ಕೆ ಮಂಟೇಸ್ವಾಮಿಗಳ ಒಕ್ಕಲಿನವರು ಇದ್ದ ಕಡೆ ಬರುತ್ತಿದ್ದರು ಎಂದು ತೊಂಬತ್ತೆರಡು ವರ್ಷದ ಕಾರಾಮರದ ಪುಟ್ಟಮಾದಯ್ಯನವರು ತಮ್ಮ ನೆನಪಿನಿಂದ ಅಳಿಸಿ ಹೋಗುತ್ತಿದ್ದ ಸಂಗತಿಯನ್ನು ನೆನಪಿಸಿಕೊಂಡು ಹೇಳಿದರು.

ಮಂಟೇಸ್ವಾಮಿಗಳ ತೋರು ಗದ್ದುಗೆಗಳು ಉತ್ತರ ಕರ್ನಾಟಕದಲ್ಲಿ ಇವೆ ಎಂಬುದು ಮುನ್ನೂರು ವರ್ಷಗಳು ವಿಸ್ಮೃತಿಗೆ ಒಳಗಾಗಿತ್ತು. ಕಳೆದ ಒಂದುವರೆ ದಶಕದಲ್ಲಿ ಮಾಡಿದ ಅಧ್ಯಯನದಿಂದ ಇದನ್ನು ಪತ್ತೆ ಹಚ್ಚಲಾಯಿತು. ಈಗ ಗುಲಬರ್ಗಾ ಜಿಲ್ಲೆಯ ಕೊಡೇಕಲ್ಲು ಬಸವಣ್ಣನ ಭಕ್ತರು ಕೊಡೇಕಲ್ಲು ಬಸವಣ್ಣನ ಮಗ ರಾಚಪ್ಪಾಜಿ ಮತ್ತು ಮಂಟೇಸ್ವಾಮಿಗಳು ನಡೆದು ಬಂದ ದಾರಿಯಲ್ಲೇ ಸು. ೮೦೦ ಕಿ.ಮೀ ದೂರವಿರುವ ಕಪ್ಪಡಿಗೆ(ಕೆ.ಆರ್.ನಗರ ತಾಲೂಕು ಮೈಸೂರು ಜಿಲ್ಲೆ) ಕಾಲು ನಡಿಗೆಯಲ್ಲಿ ಬಂದು ಹರಕೆ ತೀರಿಸಿ ಹೋಗುತ್ತಾರೆ.

## ಮಂಟೇಸ್ವಾಮಿಯನ್ನು ಕುರಿತ ಅಧ್ಯಯನಗಳು

ಕಳೆದ ಹತ್ತು ವರ್ಷಗಳಲ್ಲಿ ಸಾಹಿತ್ಯ ಅಧ್ಯಯನಗಳು ಸಂಸ್ಕೃತಿ ಅಧ್ಯಯನಗಳಾಗಿ ರೂಪಾಂತರ ಗೊಳ್ಳುತ್ತಿರುವ ಸಂಕ್ರಮಣ ಕಾಲದಲ್ಲಿ ನಾವಿದ್ದೇವೆ. ಇದೇ ಹೊತ್ತಿನಲ್ಲಿ ಮಂಟೇಸ್ವಾಮಿಯನ್ನು ಕುರಿತಂತೆ ಸಂಪಾದಿತ ಕಾವ್ಯಗಳು, ಸಂಶೋಧನೆಗಳು, ಜನಪ್ರಿಯ ಕ್ಯಾಸೆಟ್‌ಗಳು, ಸಂವಾದ ಸಮಾವೇಶಗಳು ನಡೆದಿವೆ. ಇದಕ್ಕೆ ಅಖಾಡವನ್ನು ಕಟ್ಟಿಕೊಟ್ಟಿದ್ದು ಕನ್ನಡ ವಿಶ್ವವಿದ್ಯಾಲಯ, ಮಂಟೇಸ್ವಾಮಿ ಪ್ರತಿಷ್ಠಾನ ಮತ್ತು ಜಾನಪದ ಅಕಾಡೆಮಿ. ೧೯೭೩ರಲ್ಲೇ ಜೀಶಂಪ ಮಂಟೇಸ್ವಾಮಿ ಕಾವ್ಯವನ್ನು ಪ್ರಕಟಿಸಿದ್ದರು. 'ಕರ್ನಾಟಕದ ಜಾನಪದ ಕಾವ್ಯ ಪ್ರಕಾರ'ಗಳೆಂಬ ಬಹುದೊಡ್ಡ ಕ್ಯಾನವಸ್‌ನಲ್ಲಿ ಮಂಟೇಸ್ವಾಮಿಯೂ ಒಂದಾಗಿ ಸೇರಿದ್ದರಿಂದ ನಂತರ ಇಪ್ಪತ್ತು ವರ್ಷಗಳಲ್ಲಿ ಅಷ್ಟೇನು ಚರ್ಚೆಗಳು ನಡೆಯಲಿಲ್ಲ. ವಿಶ್ವಾಲಯದಿಂದ 'ಧರೆಗೆ ದೊಡ್ಡವರ ಕಥೆ'(೧೯೭೭), ಕನ್ನಡ ವಿಶ್ವವಿದ್ಯಾಲಯದಿಂದ 'ಮಂಟೇಸ್ವಾಮಿ ಕಾವ್ಯ'(೧೯೯೭), ಅಕ್ಷರ ಪ್ರಕಾಶನದಿಂದ 'ಅಲ್ಲಮ ಶೈವ ಪ್ರತಿಭೆ'(೨೦೦೦), ಮತ್ತು ಕನ್ನಡ ವಿಶ್ವವಿದ್ಯಾಲಯದಿಂದ 'ಮಂಟೇಸ್ವಾಮಿ ಪರಂಪರೆ'(೧೯೯೯) ಪುಸ್ತಕಗಳು ಬಂದ ಮೇಲೆ ಕರ್ನಾಟಕದ ಎಲ್ಲಾ ಸಂಸ್ಕೃತಿ ಚಿಂತಕರು ಈ ವಿಷಯವನ್ನು ಗಂಭೀರವಾಗಿ ಪರಿಗಣಿಸುವ ಒಂದು ವಾತಾವರಣ ನಿರ್ಮಾಣವಾಯಿತು. ಈ ಒಂದು ದಶಕ ಮಂಟೇಸ್ವಾಮಿ ಕಾವ್ಯದ ಚರ್ಚೆಗಳ ಉತ್ಕರ್ಷ ಕಾಲ. ಜಾಗತೀಕರಣದ ಬಿಕ್ಕಟ್ಟುಗಳು, ದೇಸಿ ಚಿಂತನೆಯ ಒತ್ತಡಗಳು, ಮಂಟೇಸ್ವಾಮಿ ಅಧ್ಯಯನವನ್ನು ಮುನ್ನೆಲೆಗೆ ತಂದು ನಿಲ್ಲಿಸಿವೆ.

೧೫ನೇ ಶತಮಾನದ ಈ ಚಾರಿತ್ರಿಕ ವ್ಯಕ್ತಿ ಯಾವ ಕಾಲಘಟ್ಟದಲ್ಲಿ ದೈವೀಕರಣಗೊಂಡ ಎಂಬುದರ ಬಗ್ಗೆ ಖಚಿತವಾಗಿ ಹೇಳಲು ಸಾಧ್ಯವಿಲ್ಲದಿದ್ದರು ನೀಲಗಾರರ ಚರಿತ್ರೆಯನ್ನು

ಆಕರವಾಗಿಸಿಕೊಂಡು ಕೆಲವು ಊಹೆಗಳನ್ನಷ್ಟೇ ಮಾಡಲು ಸಾಧ್ಯ. ಮಂಟೇಸ್ವಾಮಿ ಮತ್ತು ಅವರ ಶಿಷ್ಯ ಪಡೆಗೆ ಶಿಷ್ಟ ಸಾಹಿತ್ಯ ಪರಂಪರೆಯೊಡನೆ ನಿಕಟವಾದ ಸಂಬಂಧವಿತ್ತು. ಶೈವ ಪುರಾಣಗಳ, ವಚನಗಳ, ಶಿವಯೋಗಗಳ ಬಗ್ಗೆ ಇವರ ಸ್ಪಷ್ಟವಾದ ಅರಿವು ಇತ್ತು ಎಂಬುದರ ಬಗ್ಗೆ ಕೊಡೇಕಲ್ಲು ಸಾಹಿತ್ಯ ನಿದರ್ಶನವಾಗಿದೆ. ಇಷ್ಟಲ್ಲದೆ ಯೋಗಸಿದ್ಧಿಯನ್ನು ಸಾಧಿಸಿ ಕೊಂಡವರು ಇವರು. ದಕ್ಷಿಣ ಕರ್ನಾಟಕದಲ್ಲಿ ತಾವು ಕಲಿತ ಸಿದ್ಧಿ ಮತ್ತು ವೈದ್ಯ ಶಾಸ್ತ್ರಗಳನ್ನು ಪ್ರಾಯೋಗಿಕವಾಗಿ ಬಳಸಿದ್ದಾರೆ. ತೋಂಟದ ಸಿದ್ಧಲಿಂಗ ಯತಿಗಳನ್ನು ಕುರಿತು ಹೇರಂಬ ಕವಿ 'ತೋಂಟದ ಸಿದ್ಧಲಿಂಗೇಶ್ವರ ಸಾಂಗತ್ಯ ಬರೆದ ಹಾಗೆ ಕೊಡೇಕಲ್ಲು ಬಸವಣ್ಣನನ್ನು ಕುರಿತು ವೀರಸಂಗಯ್ಯ 'ನಂದಿ ಆಗಮ ಲೀಲೆ' ಬರೆದಿದ್ದಾರೆ. ಮಂಟೇಸ್ವಾಮಿಗಳನ್ನು ಕುರಿತು ಅವರ ಶಿಷ್ಯರ್‍ಯಾರು ಶಿಷ್ಟ ಸಾಹಿತ್ಯವನ್ನು ರಚಿಸಲಿಲ್ಲ. ನಂತರ ಈ ಕಥನಕೊಂದು ಸಾಂಸ್ಕೃತಿಕ ಮನ್ನಣೆ ಹೆಚ್ಚಾದ್ದಾರಿಂದ ಎಡಗೈನವರಿಂದ ಬಲಗೈನವರು ಕತೆ ಕಲಿತು ಮೌಖಿಕ ಪರಂಪರೆಯಲ್ಲಿ ಜೀವಂತವಾಗಿ ಉಳಿಸಿದ್ದಾರೆ.

ಎಪ್ಪತ್ತರ ದಶಕದಲ್ಲಿ ದಲಿತ ಚಳವಳಿ ಮುಂಚೂಣಿಗೆ ಬಂದಾಗ ವಚನ ಪರಂಪರೆಯ ಆಶಯಗಳನ್ನು ಎತ್ತಿಹಿಡಿಯಿತು. ತೊಂಬತ್ತರ ದಶಕದಲ್ಲಿ ದಲಿತ ಚಳವಳಿ ಅವನತಿಯ ದಾರಿಗಳನ್ನು ಹಿಡಿದಾಗ ಅದರ ಸೋಲಿಗೆ ಸಮುದಾಯಗಳ ನಂಬಿಕೆ ಮತ್ತು ಸಂಸ್ಕೃತಿಯನ್ನು ಪರಿಗಣಿಸದೆ ಇದ್ದದ್ದು ಒಂದು ಕಾರಣವೆಂದು ಅರಿಯಲಾಯಿತು. ಆದ್ದರಿಂದ ದಲಿತ ಚಳವಳಿಯ ಮುಂಚೂಣಿಯಲ್ಲಿದ್ದ ನಾಯಕರು ಮತ್ತು ಬರಹಗಾರರು ಈ ಜನಪದ ಸಂಸ್ಕೃತಿಯನ್ನು ಅರಿತುಕೊಳ್ಳುವ ಆ ಮೂಲಕ ದಲಿತ ಸಂಸ್ಕೃತಿಯನ್ನು ಪುನರ್ ವ್ಯಾಖ್ಯಾನಿಸುವ ಪ್ರಯತ್ನಗಳು ನಡೆದವು. ದೇವನೂರು ಮಹಾದೇವ ಅವರ 'ಕುಸುಮಬಾಲೆ' ಕಾದಂಬರಿಯನ್ನು ಪೂರ್ವಿಕ ಮಲೆಮಹಾದೇಶ್ವರನಿಗೆ ಅರ್ಪಿಸಿದರು. ಇದೇ ಸಂದರ್ಭದಲ್ಲಿ ಎಚ್.ಎಸ್. ಶಿವಪ್ರಕಾಶ್ ಅವರು 'ಮಂಟೇಸ್ವಾಮಿ ಕಥಾಪ್ರಸಂಗ' ನಾಟಕವನ್ನು ಬರೆದು ನೂರಾರು ಪ್ರದರ್ಶನಗಳ ಮೂಲಕ ನಗರ ಜನತೆಗೆ ಪರಿಚಯಿಸುವ ಕೆಲಸ ಮಾಡಿದರು. ಮಂಟೇಸ್ವಾಮಿ ಕಥಾಪ್ರಸಂಗ ನಾಟಕ ಎಡಪಂಥೀಯ ಚಿಂತಕರ ಆಶಯದ ಕತೆಯಾಗಿತ್ತು. ಕಳೆದ ಒಂದು ದಶಕದಲ್ಲಿ ಮಂಟೇಸ್ವಾಮಿ ಪರಂಪರೆಯನ್ನು ಕುರಿತಂತೆ ಹತ್ತಾರು ಅಧ್ಯಯನಗಳು, ಪಿಎಚ್.ಡಿ ಮಹಾ ಪ್ರಬಂಧಗಳು ಬಿಡಿಲೇಖನಗಳು ಬಂದಿವೆ. ಅವುಗಳಲ್ಲಿ ಮೇಲ್ಕಂಡ ಆಶಯಗಳ ಪ್ರಭಾವ ಕಾಣುತ್ತದೆ.

# ಪರಿವಿಡಿ



**ಅನುಬಂಧ**

# ಪ್ರಾರ್ಥನೆ

ವಿದ್ಯೆಗುರುವಿಗೆ ಶರಣು
ಬುದ್ಧಿಗುರುವಿಗೆ ಶರಣು
ನನಗೆ ವಿದ್ಯೆಕಲಿಸಿದ
ಗುರು. . . .ವಿಗೆ* ಶರಣು

ಸರಸ್ವತಿಯೇ ಶಾರದಾಂಬೆ
ಆರಲೇ ಮಾವಿನ
ತಾಳೀನಲ್ಲಾಡುವವಳೆ
ನಮ್ಮ ತಾಳ ತಂಬೂರಿಗೆ
ನಲಿಯುವವಳೆ ||

ತಾಳ ತಂಬೂರಿಗೆ
ನಲಿಯುವವಳೆ ಸರಸ್ವತಿಯೆ
ತಾಳಿಂದಕ್ಷರವ ಕಲಿಸವ್ವ ||

ಎಂಟೆಲೆ ಮಾವಿನ
ದಂಟಿನಲ್ಲಾಡುವವಳೆ
ನಮ್ಮ ಗಂಟಾಲ ಸ್ವರವ
ಬಿಡಿಸವ್ವ ಸರಸ್ವತಿಯೆ||

ಒಂಬತ್ತೆಲೆ ಮಾವಿನ
ತುಂಬಿದ ತಲೆಯವಳೆ
ತುಂಬಿ ತುಳುಕುತ್ತಾ
ಬಾರಮ್ಮ ಸರಸ್ವತಿಯೆ||

ಹತ್ತೆಲೆ ಮಾವಿನ
ಕೆತ್ತಿದುಂಗುರದವಳೆ
ರತ್ನದ ಹಲಗೆಯಾ
ಬಲಗೈಲಿ ಹಿಡುಕೊಂಡು ಸರಸ್ವತಿಯೆ||

೧

# ಜಗತ್ತು ಸೃಷ್ಟಿಯ ಸಾಲು

ಸಿದ್ದಯ್ಯ ಸ್ವಾಮಿ ಬನ್ನಿ
ಪರಂಜ್ಯೋತಿ
ಲಿಂಗಯ್ಯ ನೀವೇ ಬನ್ನಿ||

ಪರಾಪರ ವಸ್ತು
ಪಾವನಾ ಮೂರುತಿ
ಪರಂಜ್ಯೋತಿ ಧರಮ ಗುರು
ಸತ್ಯವಂತರ ಮನೆಯೊಳಗೆ
ಎತ್ತುವೆನು ನಿನ್ನ ಶಿವನುಡಿಯ
ತಪ್ಪು ಒಪ್ಪು ನಿನ್ನ ಪಾದಕ್ಕೆ ಅರುವಾಗಲಪ್ಪ

ಮಹಾನುಭಾವ ಧರೆಗೆ ದೊಡ್ಡವರು ಮೊಟ್ಟಮೊದಲು ಓಂಕಾರ ಮಯ ಸ್ವರೂಪ ನಾಗಿದ್ದಾನ. ಅಡ್ಡೊಟ್ಟವಳಗೆ ಸಮುದ್ರ ತುಂಬಿ ತುಳುಕಾಡುತದ. ನೀರು ಓಂ ಅನ್ನುತಾದ. ಓಂ ಅನ್ನೋ ಶಬುದಕ್ಕಾ ಮಂಡಲ ಹೊಡೆದಾಗ ಉತ್ತರ ಕಾಂಡದಲ್ಲಿ ತಾವರ ಕಮಲ ಕೆರಲಿತು. ಮಹಾನುಭಾವ ಆದಿ ಸಂಗಮೇಶ್ವರ ತಾವರ ಕಮಲದೊಳಗ ದುಂಬಿ ರೂಪವಾಗಿ ಜನ್ಮಪಡೆದಿದ್ದರಾ ಉತ್ತರ ದೇಶದಲ್ಲಿ ನಾಲ್ಕು ಮೂಲೆ ಎಂಟು ಕೊಳಗಳು ನಿರ್ಮಾಣವಾಗಿ ಆಕಾಶಕ್ಕೆ ಆದಿ ತರಬೇಕೆಂದು ಹೇಳಿ ಜಲಾಜಾಂಬಂತನನ್ನು ಪಡೆದಿದ್ದಾರಾ. ಹುಟ್ಟಿದಂತಹ ಜಲಾಜಾಂಬತನನ್ನ ಗಂಡುಗತ್ರಿ ತೆಗೆದು ಒಂದೇಟಿಗೆ ಸಂಹಾರ ಮಾಡಿದ್ದಾರಾ. ಉರಿ ಉರಿ ಅಂತ ಹೊದ್ದಾಡಿದ ಜಾಂಬವಂತ 'ಆಕಾಶ ಆದಿ ಬಂತು ನನಗೆ ಮುಕ್ತಿ ಕೊಡಿ ಅಂದ'. 'ಕಂದ ನಿನ್ನ ರಕ್ತ ಬಿದ್ದ ಜಾಗವೆಲ್ಲಾ ಕೆಂಪು ಮಣ್ಣಾಗಲಿ, ಈಲಿ ಬಿದ್ದ ಜಾಗವೆಲ್ಲಾ ಕಪ್ಪು ಮಣ್ಣಾಗಲಿ, ತೊಳ್ಳ ಬಿದ್ದ ಜಾಗವೆಲ್ಲಾ ಕರಳು ಮಣ್ಣಾಗಲಿ, ನಿನ್ನ ಮೂಳ ಮುರ್ಕೆಲ್ಲಾ ಅಟ್ಟಿಬೆಟ್ಟ, ಗುಡ್ಡವಾಗಿ ಬೆಳೆಯಲಿ ನನ್ನ ಕಂದ.'

ಅದರುವಂತ ಭೂಮಿಯನ್ನ
ದೃಷ್ಟಿಯನ್ನಿಟ್ಟು ನೋಡುತ್ತಾರಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಮಟ್ಟಿಕಪ್ಪು ಬಸುಮಾಂಗ
ಕೈಯೊಳಗ ತಕ್ಕೊಂಡು
ಭೂಮಿ ಮೇಲೆ ಚೆಲ್ಲಾಡಿ
ಎಪ್ಪತ್ತೇಳು ಮಂತ್ರ
ಜಪಿಸುತ್ತಾ ಗುರುವು
ನವಿಲು ಮರಿಯನ್ನೇ ಪಡೆದು
ಮೂರು ಮೊಟ್ಟೆಗಳನ್ನಿಟ್ಟಾಗ

ಒಂದು ಮೊಟ್ಟೆಯನ್ನು ತೆಗೆದು
ಭೂಮಿ ಮೇಲೆ ಚೆಲ್ಲಾಡಿ
ರಕುತ ಮುನಿಯನ್ನೇ ಪಡೆದ
ಪಾರು ಮುನಿಯನ್ನೇ ಪಡೆದ
ಪಚ್ಚು ಮುನಿಯನ್ನೇ ಪಡೆದ
ಹೆಪ್ಪು ಮುನಿಯನ್ನೇ ಪಡೆದ
ಅದರುವಂತ ಭೂಮಿಯನ್ನು
ಹೆಪ್ಪುಗಟ್ಟಿ ನಿಲ್ಲಿಸುತ್ತಾರೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಮತ್ತೊಂದು ಮೊಟ್ಟೆಯನ್ನು ಎತ್ತಿ
ಭೂಮಿ ಮೇಲೆ ಚೆಲ್ಲಾಡಿ
ಹಕ್ಕಿ ಪಕ್ಷಿಗಳ ಪಡೆದ
ಜೀವ ಜಂತುಗಳ ಪಡೆದ
ಮರಗಿಡಗಳನ್ನೇ ಪಡೆದ ||ಸಿದ್ದಯ್ಯ ಸ್ವಾಮಿ ಬನ್ನಿ||

ಮತ್ತೊಂದು ಮೊಟ್ಟೆಯನ್ನು ಎತ್ತಿ
ಭೂಮಿ ಮೇಲೆ ಚೆಲ್ಲಾಡಿ
ಅಳ್ಳು ಗಿಡವನ್ನೇ ಪಡೆದ
ಎಳ್ಳು ಗಿಡವನ್ನೇ ಪಡೆದ ||ಸಿದ್ದಯ್ಯ ಸ್ವಾಮಿ ಬನ್ನಿ||

ಹೀಗೆ ಮಹಾನುಭಾವ ಧರೆಗೆದೊಡ್ಡವರು ಮೂರು ಮೊಟ್ಟೆಗಳನ್ನು ಚೆಲ್ಲಾಡಿ ಅದರುವಂತ ಭೂಮಿಯನ್ನು ಗಟ್ಟಿಂಗ ಮಾಡಿ ಜೀವ ಜಂತುಗಳನ್ನು, ಮರಗಿಡಗಳನ್ನು, ಪಶು ಪಕ್ಷಿಗಳನ್ನು ಪಡೆದು ಜಗತ್ತನ್ನು ನಿರ್ಮಾಣ ಮಾಡಿ, ಭೂಮಿಯನ್ನು ಪಡೆದು ಈ ಕತ್ತಲರಾಜ್ಯಕ್ಕೆ ಬೆಳಕು ತರಬೇಕಂತಾ ಹೇಳಿ ಸೂರ್ಯ ಚಂದ್ರರ ಲೋಕಕ್ಕೆ ಹೋಗಿದ್ದಾರೆ. 'ಏನಪ್ಪ ಸೂರ್ಯಚಂದ್ರರ ಈ ಕತ್ತಲ ರಾಜ್ಯದ ಕರ್ಮವ ಕಟ್ಟಿಕೋತೀರೋ ಬಿಡುತ್ತೀರೊ' 'ಬ್ಯಾಡಿ ಮಹಾಪ್ರಭು' ಅಂದರು 'ಹಾಗಾದರೆ ಸೂರ್ಯ ಚಂದ್ರರೇ',

ಹೊತ್ತಾರೆ ಹೊತ್ತುನಂತೆ
ಸೂರ್ಯದೇವ ಬರಬೇಕು
ಸಾಯಂಕಾಲ ಟೇಮಿನಲ್ಲಿ
ಚಂದ್ರದೇವ ಬರಬೇಕು

ಅಣ್ಣಾನಾ ಮುಖವ
ತಮ್ಮ ನೋಡಂಗಿಲ್ಲ
ತಮ್ಮನಾ ಮುಖವ
ಅಣ್ಣಾ ನೋಡಂಗಿಲ್ಲ ||ಸಿದ್ದಯ್ಯ ಸ್ವಾಮಿ ಬನ್ನಿ||

ಸೂರ್ಯ ಚಂದ್ರರನ್ನು ಪಡೆದು ಜಲಜಲನೆ ಬೆವತು ಹೋಗಿದ್ದಾರೆ. ಹೀಗೆ ಬೆವತು ಹೋದ ಬೆವರನ್ನು ತಮ್ಮ ಹಣೆಯಿಂದ ಬಾಚಿ ತೆಗೆದು ಭೂಮಿಗೆ ಎಸೆದಾಗ ಪಡೆದಿದ್ದ ಅಳ್ಳು ಗಿಡ, ಎಳ್ಳು ಗಿಡ ಕ್ಷಣ ಮಾತ್ರದಲ್ಲಿ ಗೊನೆ ಬಿಟ್ಟು ಬಾಗಿ ವಾಲಾಡುತಾವ. ಒಂದು ಅರಳು ಕಾಯಿಯನ್ನೇ ಕಿತ್ತು ಅಂಗೈಯಲ್ಲಿಟ್ಟುಕೊಂಡು

ಅಂಗೈಯಲ್ಲಿಟ್ಟುಕೊಂಡು ತಂದೆ
ಮುಂಗೈಯಲ್ಲಿ ಎಣ್ಣೆ ಬಸಿಯುತ್ತಾರೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಕಾವಿ ಬಟ್ಟೆಯ ತೆಗೆದು
ಎಣ್ಣೆ ಬತ್ತಿಯ ಮಾಡಿ
ಕತ್ತಲ ರಾಜ್ಯಕ್ಕೆ ತಕ್ಕುದಾದ
ಜ್ಯೋತಿಯನ್ನ ಪಡೆಯುತ್ತಾರ ||ಸಿದ್ದಯ್ಯ ಸ್ವಾಮಿ ಬನ್ನಿ||

ಬಡವರ ಮನೆಯ ಜ್ಯೋತಿ
ಬಲಿಗಾರ ಮನೆಯ ಜ್ಯೋತಿ
ಸತ್ತವರ ಮನೆಯ ಜ್ಯೋತಿ
ಹೆತ್ತವರ ಮನೆಯ ಜ್ಯೋತಿ
ಅರಸಗಳ ಮನೆಯ ಜ್ಯೋತಿ
ಗುರುಗಳ ಮನೆಯ ಜ್ಯೋತಿ
ಗುರುಕಾರ ಮನೆಯ ಜ್ಯೋತಿ
ಹೊಲೆಯರ ಮನೆಯ ಜ್ಯೋತಿ
ಒಡೆಯರ ಮನೆಯ ಜ್ಯೋತಿ
ಕುರುಬರ ಮನೆಯ ಜ್ಯೋತಿ
ಕುಂಬಾರ ಮನೆಯ ಜ್ಯೋತಿ
ಮಾದಿಗರ ಮನೆಯ ಜ್ಯೋತಿ

ತಿಪ್ಪಮೇಲಾ ಹಸ್ಸಿಟ್ಟಿರು ಹತ್ಕೋ
ಉರಿಯೊ ಪರಂಜ್ಯೋತಿ ||ಸಿದ್ದಯ್ಯ ಸ್ವಾಮಿ ಬನ್ನಿ||

ಕತ್ತಲ ರಾಜ್ಯಕ್ಕೆ ತಕ್ಕುದಾದ ಜ್ಯೋತಿಯನ್ನು ಪಡೆದು ಪರಂಜ್ಯೋತಿಯಾಗಿದ್ದಾರೆ. 'ಆಕಾಶ ಆದಿ ಬಂತು ನನಗೆ ಮುಕ್ತಿ ಕೊಡಿ' ಅಂದ ಜಲಾಜಾಂಬವಂತ. 'ಆಕಾಶ ಆದಿ ತಂದುದಕ್ಕೆ ಕಂದ ನಿನಗೆ ಆದಿ ಪರಾಶಕ್ತಿಯೆಂದು ನಾಮಕರಣವಾಗಲಿ' ಎಂದು ಕಪ್ಪು ಧೂಳ್ತ ಇಟ್ಟಿದ್ದಾರೆ. ಇಟ್ಟಂತ ಕಪ್ಪು ಧೂಳ್ತದಲ್ಲಿ ಹದಿನಾರು ವರ್ಷದ ಬಾಲಕಿ ಹುಟ್ಟಿ ಕಾಮ, ಕ್ರೋಧ, ಮದ, ಮತ್ಸರ ತುಂಬಿಕೊಂಡು ಜಗತ್ತನ್ನೇ ಹಾರೈಸುವ ಆದಿ ಪರಾಶಕ್ತಿ ಜನ್ಮ ತಳೆದಳು. ಆಗ 'ನನ್ನ ಕಾಮಮಟ್ಟ ಮಾಡಕ ಗಂಡು ಪ್ರಾಣಿ ನಿರ್ಮಿತಿ ಮಾಡಿಕೊಡು' ಅಂತ ಅಪ್ಪಾಜಿ ಹತ್ತಿರಕ್ಕೆ ಓಡೋಡಿ ಬರುತ್ತಿದ್ದಾಳೆ. ಮಹಾನುಭಾವ ನೋಡಿದ್ರು. 'ಯಾಕಮ್ಮ' 'ನನ್ಗ ಗಂಡು ಪ್ರಾಣಿ ನಿರ್ಮಿತ ಮಾಡ್‌ಕೊಡು, ಅಲ್ಲದೆರಾ ನನ್ನ ಲಗ್ನಾ ಆಗು' ಅಂಥಾ ಕೇಳಿದ್ದಾಳೆ. ಕಣ್ಣಾ ಮುಚ್ಕಂಡ್ರು ಏಕಾಂಗಿ ವಸ್ತು ಅಲ್ಲಮಪ್ರಭು, 'ನಿರಾಮಯ ಅಂದ್ರಾ ಎಲ್ಲ ಕಾಣ್ತಾದಾ ಕಣ್ಣಬುಟ್ರಾ ಏನು ಕಾಣದಿಲ್ಲಾ'

ಪರಾಶಕ್ತಿ ಆಡಿದ ಮಾತಕೇಳಿ
ಹರಹರ ಎಂದು ಎರಡು ಕರಣಗಳ
ಮುಚ್ಚುತವರಾ
ಶಂಕರ ಗುರುದೇವ ||ಸಿದ್ದಯ್ಯ ಸ್ವಾಮಿ ಬನ್ನಿ||

'ಕಂದಾ, ನಾನು ಕರಿತಲಾ ಜಾತಿ, ಹೆಣ್ಣಾ ಕಣ್ಣೆತ್ತಿ ನೋಡಾದಿಲ್ಲಾ, ನಾನು ಏಕಾಂಗಿ ವಸ್ತು ನಿರಾಮಯ. ಹೇ ಆದಿಪರಾಶಕ್ತಿ ನಿನ್ನ ಕಾಮಮಟ್ಟ ಮಾಡ್ಬೇಕು ಅಂದ್ರಾ ತ್ರಿಮೂರ್ತಿಗಳ್ಗ ಪತ್ನಿ ಆಗು"

ಅಪ್ಪಲ್ಲಾಡಿದ ಮಾತಾ
ಪರಾಶಕ್ತಿ ಕೇಳ್ಕಂಡು
ಚಕರಮಟ್ಟಿ ಕಾಲ
ಆಕ್ಕಂಡು ಕೂತ್ಕಂಡು
'ಅ' ಕಾರ ಅಂದಳಂತಾ
ಬ್ರಮ್ಮದೇವರ ಪಡೆದಳಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಬ್ರಮ್ಮದೇವರು ಹುಟ್ಟಿದೇಟಿಗೆ 'ಶರಣು ಶರಣಾರ್ಥಿ ಜಗದಾಂಬಿಕೆ, ಜಗತ್ತಿಗೆ ಅನ್ನಕೊಡುವ ಅನ್ನಪೂರ್ಣೇಶ್ವರಿ, ನನ್ನ ಪಡೆದ ಕಾರಣವೇನು ತಾಯಿ' ಅಂತಾ ಕೇಳಿದಾ. ಪರಾಶಕ್ತಿ ಹೇಳ್ತಾ 'ನನ್ನ ಲಗ್ನ ಆಗ್ಬೇಕಪ್ಪಾ' ಬ್ರಮ್ಮದೇವರು ಹೇಳಿದ್ರು. 'ಹೆತ್ತ ತಾಯಿ ಬೇರೆ ಅಲ್ಲ, ಪಡೆದ ತಾಯಿಬೇರೆ ಅಲ್ಲಾ, ಖಂಡಿತವಾಗಿ ನಾನು ಲಗ್ನ ಆಗದಿಲ್ಲಾ' ಅಂದಾ.

ಬ್ರಮ್ಮಲ್ನಾಡಿದಮಾತಾ
ಪರಾಶಕ್ತಿ ಕೇಳ್ಕಂಡು
ಉರಿಹಸ್ತ ತೆಗದಳಂತಾ
ಬ್ರಮ್ಮನ ಮೇಲಾ ಮಡಗುತಾಳ ||ಸಿದ್ದಯ್ಯ ಸ್ವಾಮಿ ಬನ್ನಿ||

ಯಾವಾಗ ಉರಿಹಸ್ತ ತೆಗ್ದು ಬ್ರಮ್ಮನ ಮೇಲಾ ಮಡಗ್ತ, ಬ್ರಮ್ಮದೇವ ಸೀದು ಬೂದಿಯಾಗಿ ಗುಡ್ಡೆಯಾಗಿ ಹೋದಾ. 'ಉ'ಕಾರ ಅಂದಾ ಪರಮೇಶ್ವರ ಪ್ರತ್ಯಕ್ಷವಾದ. 'ಶಿವ ನನ್ನ ಲಗ್ನ ಆಗ್ ಬಾ' 'ಖಂಡಿತವಾಗಿ ನಾ ಲಗ್ನಾ ಆಗಾದಿಲ್ಲ ತಾಯಿ' ಅಂದಾ. ಅದೇ ಉರಿಹಸ್ತ ತೆಗ್ದು ಶಿವನ ನೆತ್ತಿ ಮೇಲಾ ಮಡಗ್ದ ಶಿವ ಸೀದ್‌ಬೂದಿಯಾಗಿ ಗುಡ್ಡೆಯಾಗಿ ಹೋದಾ. 'ಅ'ಕಾರ 'ಉ'ಕಾರ 'ಮ'ಕಾರ ಮೂರ್ನೂ ಸೇರ್ಸಿ

ಓಂಕಾರ ಅಂದಳಂತಾ
ಮಾವಿಷ್ಣು ಪಡೆದಳಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

'ಶರಣಾರ್ಥಿ ನನ್ನ ತಾಯಿ, ಪಡೆದ ಕಾರಣವೇನಮ್ಮ' ಪರಾಶಕ್ತಿ ಹೇಳ್ದ 'ನನ್ನ ಲಗ್ನ ಆದ್ರ ಸರಿ, ಆಗದೇ ಇದ್ರ ಇವರಿಬ್ರುನೂ ಸೀದ್ ಬೂದಿ ಮಾಡಿವಿನಲ್ಲಾ ಅದೇ ರೀತಿ ನಿನ್ನು ಸೀದ್ ಬೂದಿ ಮಾಡ್ತೀನಿ' ಅಂದಾ. ಮಾವಿಷ್ಣು 'ಇವೆಲ್ಲೀ ಯಾಗಾರ ಮಾಡಿ ಸೀದ್ ಬೂದಿ ಮಾಡ್ಬೇಕು' ಅಂತಾ 'ಅಮ್ಮ ನಿನ್ನ ಕಾಮಮಟ್ಟ ಮಾಡಾಕ ನನ್ನ ಒಬ್ಬನಿಂದ ಸಾಧ್ಯವಿಲ್ಲ ಇವರಿಬ್ರುನ್ನು ಪಡೆದ್ರ ಖಂಡಿತವಾಗಿ ತ್ರಿಮೂರ್ತಿಗಳಾಗ್ತೀವಿ. ಆಗ ನಿನ್ನ ಕಾಮಮಟ್ಟ ಆಗ್ತದಾ' ಪರಾಶಕ್ತಿ ಮತ್ತೊಂದು ಸಾರಿ 'ಅ'ಕಾರ 'ಉ'ಕಾರ 'ಮ'ಕಾರ ಮೂರ್ನೂ ಸೇರ್ಸಿ 'ಓಂಕಾರ' ಎಂದಿದ್ದಳಾ, ಬ್ರಮ್ಮದೇವ್ರು ಪ್ರತ್ಯಕ್ಷ ಆಗಿದ್ದಾರ. ಶಿವ ಪ್ರತ್ಯಕ್ಷ ಆಗಿದ್ದಾನ. ಇವರಿಬ್ಬರುಗೂ ಮಧ್ಯದಲ್ಲಿ ಮಾವಿಷ್ಣು ನಿಂತು ಹೇಳ್ದ 'ಬ್ರಹ್ಮದೇವಾ ನಾ ಲಗ್ನ ಆಯ್ತಿನಿ ಅಂತೇಳಿ ನಿನ್ಗ ಬೇಕಾದ ಸಾಮಾನ್ನೆಲ್ಲಾ ಕಿತ್ಕ'. ಬ್ರಮ್ಮದೇವ ಆರುಸಾವಿರ ಹದಿನೆಂಟು ಪುರಾಣ ಗ್ರಂಥಗಳ ಕಿತ್ಕಂಡ. ದಂಡವನ್ನು ಕಿತ್ಕಂಡ. ಶಿವ 'ನಾ ಲಗ್ನ ಆಯ್ತಿನಿ' ಅಂತೇಳಿ ತ್ರಿಶೂಲ, ಡಮರುಗವನ್ನು ಕಿತ್ಕಂಡ. ಮುಕ್ಕಣ್ಣನ್ನೂ ಕಿತ್ಕಂಡ. ಮಾವಿಷ್ಣು 'ನಾ ಲಗ್ನ ಆಯ್ತಿನಿ' ಅಂತೇಳಿ ಶಂಕು, ಚಕ್ರಾಧಿಗಳು ಬಿಲ್ಲು, ಬಾಣ, ದಂಡ, ಗದಾ, ಮಾಯಾಜಾಲ ಕೊರಾಳನ್ನು ಕಿತ್ಕಂಡ. ಆದಿಪರಾಶಕ್ತಿ ಶಕ್ತಿನೆಲ್ಲಾ ತ್ರಿಮೂರ್ತಿಗಳು ಕಿತ್ಕಂಡ್ರು. ಉರಿಹಸ್ತ ಮಾತ್ರ ಅವಳತವು ಉಳಕತು. ಮಾವಿಷ್ಣು ಹೇಳ್ದ 'ಅಮ್ಮಾ ನಾ ನಿನ್ನ ಜೊತ ಲಗ್ನ ಆಗ್ಬೇಕಾದ್ರ ನಾ ಯಾವ ರೀತಿ ತಪ್ಸನ್ನ ಆಚರ್ಸತೀನಿ ಅದೇ ರೀತಿ ತಪ್ಸನ್ನ ಆಚರಣೆ ಮಾಡು 'ಆಯ್ತು' ಅಂತೇಳಿ ಒಪ್ಪುವೀಳ್ಯ ಕೊಟ್ಬಿದ್ದಾಳ. ಮಾವಿಷ್ಣು ನಲಿದು ನಾಟ್ಯವನ್ನಾಡಿ ಎರಡು ಕೈಯನ್ನು ಎತ್ತಿ ನೆತ್ತಿ ಮೇಲಾ ಮಡಗ್ತ, ಪರಾಶಕ್ತಿ ನಲಿದು ನಾಟ್ಯವಾಡಿ ಅದೇ ರೀತಿಯಾಗಿ ಮಡುಗುದ್ನು ಉರಿಹಸ್ತ ಅವಳ ಕೈಲಿತ್ತು.

ಆದಿಪರಾಶಕ್ತಿಯಾಗ
ಸೀದ್ ಬೂದಿ ಅದಳಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಒಂದ್ ಗುಡ್ನ ಬೂದ್ಯಾ
ಮೂರು ಭಾಗ ಮಾಡಿದ್ರು
ಬ್ರಮ್ಮದೇವ ಒಂದ್ ಭಾಗ
ಮಾವಿಷ್ನು ಒಂದ್ ಭಾಗ
ಶಿವನ್ಗ ಒಂದ್ ಭಾಗ
ಮೂರ್ ಭಾಗ ಮಾಡ್ಕಂಡು
'ಅ' ಕಾರ 'ಉ'ಕಾರ
'ಮ'ಕಾರ ಅಂತೇಳಿ
ಓಂಕಾರ ಅಂದರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಯಾವಾಗ, ಮೂರು ಭಾಗವನ್ನು ಮಾಡಿಕೊಂಡು ಮಂತ್ರ ಜಪಿಸಿದ್ರೂ, ಬ್ರಮ್ಮದೇವ್ರ ಕೂತಿದ್ದ ಬೂದಿಭಾಗದಲ್ಲಿ ಸರಸ್ವತಿಯಾಗಿ ಬಂದಿದ್ದಾಳೆ. ಮಾವಿಷ್ನು ಕೂತಿದ್ದ ಬೂದಿ ಭಾಗದಲ್ಲಿ ಆದಿಲಕ್ಷ್ಮಿ ಬಂದಿದ್ದಾಳೆ. ಶಿವ ಕೂತಿದ್ದ ಜಾಗದಲ್ಲಿ ಪಾರ್ವತಿಯಾಗಿ ಬಂದಿದ್ದಾಳೆ. ಮಧ್ಯದ ಗುಡ್ನದಲ್ಲಿ ಉದ್ಭವವಾದ ಆದಿಪರಾಶಕ್ತಿ. 'ಉತ್ತರಕಾಂಡದಲ್ಲಿ ಉತ್ಪತ್ತಿಯಾದಾಗ ತ್ರಿಮೂರ್ತಿಗಳ ಪತ್ನಿಯಾಗು ಅಂಥಾ ಶಾಪವಿತ್ತು, ಇವೊತ್ತು ನನ್ನ ಶಾಪ ವಿಮೋಚನೆ ಆಯ್ತು. ಇದೋ ಮೂರ್ ಜಲ್ಮವೆತ್ತಿ ಬಂದಿ, ಬ್ರಹ್ಮದೇವ ನೀನು ನಾ ಹೆಚ್ಚು ಅನ್ನೊ ಆಗಿಲ್ಲಾ. ಶಿವ ನೀನು ನಾ ಹೆಚ್ಚು ಅನ್ನೊಗಿಲ್ಲಾ. ಮಾವಿಷ್ನು ನೀನು ನಾ ಹೆಚ್ಚು ಅನ್ನೊಗಿಲ್ಲಾ. ನೀಮ್ ಮೂವರಲ್ಲಿ 'ನಾನು' ಎನ್ನುವ ಉದ್ಭವ ಯಾನಾದರು ಆದ್ರ ನಾನೇ ಬಂದು ಸಂವಾರ ಮಾಡ್ಬೇಕ್ಯಾತದಾ'. ತ್ರಿಮೂರ್ತಿಗಳು ಸೇರಿ ಸಾಷ್ಟಾಂಗ ನಮಸ್ಕಾರ ಮಾಡಿದ್ರು. 'ತಾವು ಅನುಗ್ರಹಿಸಬೇಕು ತಾಯಿ'. 'ಕಂದಾ ನಿಮ್ಮನ್ನು ಪಡೆದಾಗ ಏನಂತಾ ಹೇಳಿದ್ರಿ ಜಗತ್ತಿಗೆ ಅನ್ನ ಕೊಡುವ ಅನ್ನಪೂರ್ಣೇಶ್ವರಿ ಜಗದಾಂಬಿಕೆ ಅಂತಾ ಹೇಳಿದ್ದೆರಲ್ಲಾ ನಾನು ಜಗತ್ತಿಗೆ ಅನ್ನ ಕೊಡಬೇಕಾದ್ರ ನರಮುಂಡಾಮಕ್ಕ ನನ್ನ ಮೇಲಾ ಬಿತ್ತಿ ಬೆಳಾ ತೆಗೀಬೇಕು ನಾನು ಜಗತ್ತಿಗೆ ಅನ್ನ ಕೊಡುವ ಭೂಮಿತಾಯಿ ಆಯ್ತೀನಿ' ಅಂದರು.

ಭೂದೇವಿಯಾಗಿ ನಾನು
ಭೂಲೋಕಕ್ಕೆ ಹೋಗ್ತಿನಿ ಅಂದಳಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

**ಅಡಿಟಿಪ್ಪಣಿ**

೧. ಇನಕಲ್ಲು ಮಹಾದೇವಯ್ಯನವರ ಪಠ್ಯದಲ್ಲಿ ಜಗತ್ತು ಸೃಷ್ಟಿಯ ಕಥೆ ಮತ್ತೊಂದು ರೀತಿ ಮುಂದುವರೆದಿದೆ. ಸೂರ್ಯಚಂದ್ರರನ್ನು ಪಡೆದು ದೇವಲೋಕದಲ್ಲಿ ತ್ರಿಮೂರ್ತಿಗಳನ್ನು ಸೃಷ್ಟಿಸಿ ಅವರಿಗೆ ಪತ್ನಿಯರಾಗಿ ಲಕ್ಷ್ಮಿ, ಸರಸ್ವತಿ ಪಾರ್ವತಿಯರನ್ನಾಗಿ ಸೃಷ್ಟಿಸಿ ಧರೆಗೆ ದೊಡ್ಡವರು ಭೂಲೋಕಕ್ಕೆ ಬಂದ ಮೇಲೆ ಒಂದು ದಿನ ವಿಧಿಯಮ್ಮ(ಸರಸ್ವತಿ) ಭೂಮಿ ತಾಯಿ ಮಣ್ಣಿನಿಂದ ಗೊಂಬೆಯೊಂದನ್ನು ಸೃಷ್ಟಿಮಾಡುತ್ತಾಳೆ. ಬ್ರಹ್ಮದೇವ ಅದಕ್ಕೆ

ಜೀವಕೊಡುತ್ತಾನೆ. ಗೊಂಬೆ ಸೃಷ್ಟಿ ಮಾಡಿದ್ದು ನಾನು ಎಂದು ವಿಧಿಯಮ್ಮ ಗೊಂಬೆ ನನ್ನದು ಎಂದು ಹೇಳುತ್ತಾಳೆ. ಜೀವಕೊಟ್ಟವನು ನಾನು ಎಂದು ಬ್ರಹ್ಮದೇವ ಗೊಂಬೆ ನನ್ನದು ಎಂದು ಹೇಳುತ್ತಾನೆ. ಇಬ್ಬರ ನಡುವೆ ಕದನ ಪ್ರಾರಂಭವಾಗುತ್ತದೆ. ಆಗ ಪ್ರತ್ಯಕ್ಷವಾದ ಧರೆಗೆ ದೊಡ್ಡವರು ವಿಧಿಯಮ್ಮನನ್ನು ಕರೆದು ನೀನು ಗೊಂಬೆಯನ್ನು ಸೃಷ್ಟಿಸಿದ ಹಾಗೆ ಜೀವಜಂತು, ಪಶುಪ್ರಾಣಿ, ಸತ್‌ಪುರುಷರನ್ನು ಸೃಷ್ಟಿಸಿ ಕೊಡು ಎನ್ನುತ್ತಾನೆ. ಅವುಗಳಿಗೆ ಬ್ರಹ್ಮದೇವ ಜೀವ ತುಂಬು ಎನ್ನುತ್ತಾನೆ. ಹೀಗೆ ಭೂಲೋಕಕ್ಕೆ ಬೇಕಾದ ಜೀವಜಂತು, ಪ್ರಾಣಿಪಕ್ಷಿ, ನರಮನುಷ್ಯರನ್ನು ಪಡೆಯುತ್ತಾರೆ. ಇವೆಲ್ಲಾ ಸೃಷ್ಟಿಯಾದ ಮೇಲೆ ವಿಧಿಯಮ್ಮ ಧರೆಗೆ ದೊಡ್ಡವರನ್ನು ಕುರಿತು ನೀವು ಸೃಷ್ಟಿಯಾಗುವುದಕ್ಕೂ ಮೊದಲೆ ಯಾವ ರೂಪಿನಲ್ಲಿದ್ದೀರಿ ಎಂದು ಪ್ರಶ್ನೆ ಮಾಡುತ್ತಾಳೆ. ಆಗ ಧರೆಗೆ ದೊಡ್ಡವರು ನೀನು ಸೃಷ್ಟಿಸಿರುವ ಜೀವಜಂತುಗಳಲ್ಲಿ ಯಾವುದರಲ್ಲೂ ಬೆಳಕು ಇಲ್ಲ. ನಾನು ಹುಟ್ಟಿಗೆ ಪೂರ್ವದಲ್ಲಿ ಬೆಳಕಿನ ಹುಳವಾಗಿ ಇದ್ದೆ ಎಂದು ಮಾರ್ಮಿಕವಾಗಿ ಉತ್ತರಿಸುತ್ತಾರೆ. ಹೀಗೆ ದೇವಲೋಕವನ್ನು ಸೃಷ್ಟಿ ಮಾಡಿದ ಧರೆಗೆ ದೊಡ್ಡವರು ನರಲೋಕದಲ್ಲಿರುವ ನರಮಾನವರಿಗೆಲ್ಲಾ ನೀವು ದೇವರುಗಳಾಗಿ ಬಾಳಿರಿ ಎಂದು ವರ ಕೊಟ್ಟು ಭೂಲೋಕದ ಕಡೆ ನಡೆದು ಬಿಡುತ್ತಾರೆ.

೨. ಮೋಳೆ ರಾಜಣ್ಣನವರ ಪಠ್ಯದಲ್ಲಿ ತ್ರಿಮೂರ್ತಿಗಳು ಇಂದ್ರಾದಿ ದೇವತೆಗಳಿಗೆ ಈ ಭೂಮಿಯನ್ನು ಸೃಷ್ಟಿಮಾಡಿದವರು ನಾವೇ ಎಂದು ಕದನ ಪ್ರಾರಂಭಿಸುತ್ತಾರೆ. ಆಗ ಬೆಳ್ಳಿತಕ್ಕಡಿಯಲ್ಲಿ ತಮ್ಮತಮ್ಮ ಬಿರುದುಗಳನ್ನು ಇಟ್ಟು ಅಳತೆ ಮಾಡಿಕೊಳ್ಳುವಾಗ ಯಾರದು ಹೆಚ್ಚು ತೂಕ ಬರುತ್ತದೊ ಅವರು ಭೂಮಿಯನ್ನು ಸೃಷ್ಟಿಮಾಡಿದವರಾಗುತ್ತಾರೆ ಎಂಬ ತೀರ್ಮಾನಕ್ಕೆ ಬರುತ್ತಾರೆ. ಬ್ರಹ್ಮದೇವ ತನ್ನ ಆರು ಸಾವಿರ ಹದಿನೆಂಟು ಪುರಾಣಗಳನ್ನು ಒಂದು ಕಡೆ ಇಡುತ್ತಾನೆ. ಶಿವ ತ್ರಿಶೂಲ ಡಮರುಗ ಇತ್ಯಾದಿ ಬಿರುದುಗಳನ್ನು ಒಂದು ಕಡೆ ಇಡುತ್ತಾನೆ. ವಿಷ್ಣು ಶಂಕು ಚಕ್ರ ಬಿಲ್ಲು ದಂಡ ಮಾಯಾಜಾಲ ಕೊರಳನ್ನು ಒಂದು ಭಾಗದಲ್ಲಿ ಇಡುತ್ತಾನೆ. ಧರೆಗೆ ದೊಡ್ಡವರು ಅರಿದ ಬೆತ್ತ, ಮುರಿದ ಶಿವ ಕಂತೆ, ಶಿವ ಜೋಳಿಗೆ ಇತ್ಯಾದಿಗಳನ್ನು ಒಂದು ಭಾಗದಲ್ಲಿ ಇಟ್ಟು, ಬೆಳ್ಳಿ ತಾರಾಸಿ(ತ್ರಾಸು)ನೊಳಗೆ ಸಮತೂಕ ಎತ್ತಿದ್ದಾಗ ಈ ಭೂಮಿಗಿಂತ ಹಿರಿದಾದ ಅಪ್ಪಾಜಿ ಅವರ ಬೆತ್ತ ಜೋಳಿಗೆ ಒಂದು ದಿನಕ್ಕೆ ಒಂದು ಹಿರಿದಾಗಿ ನಿಂತು ಬಿಡುತ್ತದೆ. ಆಗ ಇಂದ್ರಾದಿ ದೇವತೆಗಳೆಲ್ಲಾ ಸೇರಿ ಅಪ್ಪಾಜಿ ಅವರಿಗೆ ಧರೆಗೆ ದೊಡ್ಡವರು ಎಂದು ನಾಮಾಂಕಿತ ಮಾಡುತ್ತಾರೆ.

೨

# ಕಲ್ಯಾಣ ಪಟ್ಟದ ಸಾಲು

ಮಹಾನುಭಾವ ಧರೆಗೆ ದೊಡ್ಡವರು ಇಂದ್ರಾನು ದೇವಾನುದೇವತೆಗಳಿಗ ದೇವಲೋಕವನ್ನು ಬಿಟ್ಟು ನರಲೋಕಕ್ಕೆ ಹೊರಟ್ಟಿದ್ದಾರೆ. ದೇವಾನುದೇವತಗಳೆ ನಾನು ಉತ್ತರಕಾಂಡದಲ್ಲಿ ಉತ್ಪತ್ತಿಯಾಗಿದ್ದೀನಿ, ನಾಳೆ ನರಲೋಕದ ಕತ್ತಲರಾಜ್ಯದಲ್ಲಿ ನರಮಾನವರಿಗೆ ಬೆಳಕು ತಂದು ಕಲಿ ಉದ್ಭವವಾಗುವ ತನಕ ನರರ ಕೈಯಲ್ಲಿ ಪೂಜೆ ಮಾಡ್ಸಕಬೇಕು' ಎಂದೇಳಿ ನರಲೋಕಕ್ಕೆ ಹೊರಟಿದ್ದಾರೆ. ಆದಿ ಕಲ್ಯಾಣಕ್ಕೆ ದೃಷ್ಟಿ ಮಡಿಗಿದ್ದಾರ..

ಕಲ್ಯಾಣ ಪಟ್ಟಣಕ್ಕೆ<br>
ನನ್ನ ದೇವರು<br>
ದಯವಾದರಂತೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಕಲ್ಯಾಣ ಪಟ್ಟಣದಲ್ಲಿ ಬಸವಣ್ಣನವರು ರಾಜ್ಯಭಾರ ಮಾಡುತ್ತಿದ್ದಾಗ, ಇರೆಂಬತ್ತು ಕೋಟಿ ಜೀವರಾಶಿಗಳಿಗೂ ನಿತ್ಯ ಅನ್ನದಾಸೋಹವನ್ನು ಮಾಡಿ ಗುರುಮಣೆ ಕಟ್ಟಿ ಗುರುವಾಗಿ ಮೆರೆಯುತ್ತಿದ್ದಾರೆ. ಸತ್ಯವಂತ ನೀಲಮ್ಮ, ಒಕ್ಕಲು, ಅಕ್ಕಿ, ಒಂದು ಬದನೆಕಾಯಿ ಕತ್ತರ್ಸಾಕಿ ಲಕ್ಷದ ಮೇಲೆ ತೊಬಂತ್ತಾರು ಸಾವಿರ ಗಣಂಗಳಿಗೆ ನಿಚ್ಚ ಬೋಜನ ಮಾಡಿ ಮಿಕ್ಕಿದ ಪ್ರಸಾದವ ಕಲ್ಲುಬಂಡೆಯ ಒಳಗೆ ಕೈಲಾಸಕ್ಕೆ ಕಳುಸುತ್ತಾವಳೆ. ಇವರ ಸತ್ಯ ಪರೀಕ್ಷೆ ಮಾಡಬೇಕೆಂದು ಕಲ್ಯಾಣ ಪಟ್ನಕೆ ದೃಷ್ಟಿ ಮಡಗಿದ್ದಾರೆ. ಆದಿ ಕಲ್ಯಾಣದ ಒಳಗೆ ಕೋಟಿಗೊಬ್ಬ ಶರಣ, ಕುಲಕ್ಕೊಬ್ಬ ಬಕುತ, ಅರವತ್ತಾರು ಮಂದಿ ಜಂಗಮರು ಮೂವತ್ತಮೂರು ಮಂದಿ ಮುನಿಗಳು, ಲಕ್ಷದ ಮೇಲೆ ಎಂಬತ್ತಾರು ಕೋಟಿ ಶರಣರಿಗೆ ಲಿಂಗಧಾರಣೆ ಮಾಡಿ ಅದು ಅಲ್ಲದೆ ಆ ಕಾವಿ ಕಲ್ಯಾಣದ ಒಳಗೆ

ಎತ್ತಿಗೂ ಲಿಂಗವಪ್ಪ<br>
ಕತ್ತೆಗೂ ಲಿಂಗವಪ್ಪ<br>
ಕೋಳಿ ಕೊತ್ತಿಗೂ ಲಿಂಗ<br>
ನಾಯಿ ನರಿಗೂ ಲಿಂಗ<br>
ಗೊಡ್ಡ ಗೋಸುಂಬಿ ಲಿಂಗ<br>
ಹಲ್ಲಿಪಲ್ಲಿಗೂ ಲಿಂಗ

ಒಂದಲ್ಲ ಎರಡಲ್ಲ
ಎಂಬತ್ತೇಳು ಕೋಟಿ
ಜೀವರಾಶಿಗಳಿಗೆಲ್ಲಾ
ಕಾವಿ ಕಲ್ಯಾಣದ ಒಳಗೆ
ಲಿಂಗಧಾರಣೆ ಮಾಡುತ್ತಾರೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಇರೆಂಬತ್ತು ಕೋಟಿ ಜೀವರಾಶಿಗಳು ಓಡೋಡಿ ಬಂದು ಬಸವಣ್ಣನ ಪಾದಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿದ್ರು. 'ಯಾಕಪ್ಪಾ' ಅಂಥ ಕೇಳಿದರು ಬಸವಣ್ಣನವರು. 'ಸ್ವಾಮಿ ನೀವು ನಮಗೆ ಗುರುಗಳಾಗಿದ್ದೀರಲ್ಲ ಆದ್ರ ನಿಮಗ ಗುರು ಯಾರ' ಅಂತ ಕೇಳಿದ್ದಾರ. ಕಲ್ಯಾಣ ಪಟ್ಟಣದ ಬಸವಣ್ಣ ಎರಡು ಕರ್ಣಗಳನ್ನು ಮುಚ್ಚುಕೊಂಡ. 'ನಿಜ ಖಂಡಿತವಾಗಿ ನಾನು ಗುರುಮುಟ್ಟದ ಗುಡ್ಡನಾಗಿದ್ದಾನೊ ಹೊರತು ನಾನು ಗುರುದೇವರಿಗೆ ಇನ್ನು ಗುಲಾಮನಾಗಿಲ್ಲ. ಆ ಗುರುಪಾದ ಕಾಣುವರಗೂ

ಈ ಲಿಂಗಮಣಿ ತೊಳೆಯಾದಿಲ್ಲ
ಲಿಂಗ ಪೂಜೆ ಮಾಡದಿಲ್ಲ
ಪೂಜೆಗೆ ಬರದಿಲ್ಲಾಂತ ಹೇಳಿ ||ಸಿದ್ದಯ್ಯ ಸ್ವಾಮಿ ಬನ್ನಿ||

ಅಷ್ಟು ಕಾಲದಿಂದ ಇಷ್ಟು ಕಾಲಗಂಟ ನಮಗಿಂತ ಹೆಚ್ಚಿನ ಗುರುಗಳು ಒಬ್ಬರು ಕಲ್ಯಾಣಕ್ಕೆ ಬಂದಿಲ್ಲ. ಅಂತ ಶರಣರು ತಾವಾಗಿ ಕಲ್ಯಾಣಕ್ಕೆ ಪ್ರವೇಶ ಮಾಡಬೇಕಾದರೆ ಕಲ್ಯಾಣದ ಕಡೆಬಾಗಿಲಿನಲ್ಲಿ

ನಾಲಿಗೆ ಇಲ್ಲದ ಗಂಟಾ
ಬಾಗಿಲಲ್ಲಿ ಕಟ್ಟಬೇಕು
ಕುಡುವಿಲ್ಲದ ನಗಾರಿ
ಬಾಗಿಲಲ್ಲಿ ಇಡಬೇಕು
ಹೆಚ್ಚಿನ ಗುರು ಬಂದಾಗ
ಕಲ್ಲುಕೋಳಿ ಕೂಗಬೇಕು
ನಾಲಿಗೆ ಇಲ್ಲದ ಗಂಟಾ
ನಾದ ಶಬುದ ಮಾಡಬೇಕು
ಕುಡುವಿಲ್ಲದ ನಗಾರಿ
ನುಡಿಬೇಕು ಅಂತ ಹೇಳಿ
ಕಡೇ ಬಾಗಲಿನಲ್ಲಿ
ಗಂಟೆ ನಗಾರಿಗಳನ್ನು ಕಟ್ಟಿಸಿದ್ದಾರೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಇತ್ತಕಡಾ ಬಸವಣ್ಣನವರು ಸಂಗಯ್ಯನ ಬಳಿಗೆ ಬರುತ್ತಾರ. ಕಿವಿಯಲ್ಲಿ ಸಣ್ಣ ವಾರ್ತೆಯೊಂದನ್ನು ಹೇಳುತ್ತಾರ. ಕಟುಕರ ಸಂಗಯ್ಯ ಬೋಜನಕ್ಕೆ ಎಲ್ಲಾ ಶಿವಶರಣರು

ಮಾತುಮುರು ಬರತ್ತಾರಾ. ಕುಷ್ಠರೋಗ ಕಾಯಿಲೆ ಇರೋರು, ಕಾಯಿಲೆ ಕಷ್ಟದವರು ಒಂಬತ್ತು ಜನ ಬಂದರೆ ಸುಖವಾಗಿರುತಕಂತ ಪುಣ್ಯವಂತರು ನೂರುಜನ ಬರುತ್ತಾರಅನ್ನ ಒಳ್ಳೆ ಶುಭವಾಗಿ ಬರುತಕ್ಕಂತಹ ಶರಣರ ಜೊತೆಯೊಳಗೆ ಈ ಕೊಳಕು ಜಂಗಮರ ಒಬ್ಬರನ್ನು ಬಿಡಬೇಡಿ ಎಂದು ಹೇಳಿಬಿಡುತ್ತಾರೆ.

ಕಲ್ಯಾಣ ಪಟ್ನಕ್ಕೆ ಅರವತ್ತಾರು ಮಂದಿ ಜಂಗುಮರು ಮೂವತ್ತಾರು ಮಂದಿ ಮುನಿದು ಮುನಿಗಳು ಲಕುಸದ ಮ್ಯಾಲೆ ತೊಂಬತ್ತೇಳು ಕೋಟಿ ಶಿವಶರಣು ಮಾತುಮರನೇ ಆದಿ ಕಲ್ಯಾಣಕ್ಕೆ ಬರಮಾಡಿಕೊಂಡು ದಿನಾ ದಿನಾ ಒಂದು ದಿವಸಾ ತಪ್ಪುದಂತೆ ಕೂಡಾ ನಿಚ್ಚ ಬೋಜನ ಮಾಡುತ್ತಿದ್ದರಂತೆ. ಅನ್ನದಾನ ಮಾಡುವ ಬಸವಣ್ಣನಾ ಪುಣ್ಯ ಸ್ಥಾನಗಳ ನಾನಾಗಿ ನೋಡಬೇಕು ಎಂದು ಕುಷ್ಠರೋಗಿಯಾಗಿ ಧರೆಗೆ ದೊಡ್ಡವರು ಕಲ್ಯಾಣ ಪಟ್ನಕ್ಕೆ ಹೊಂಟಿದ್ದಾರ

ಸತ್ತೆಮ್ಮ ಚಕಳವಾ
ಹೆಗಲಮೇಲ ಹೊತ್ಕಂಡು
ಆರುಖಿಂಡುಗ ಕಜ್ಜಿ
ಕೀವು ರಸಿಕನ ಒಳಗೆ
ಏಳು ಗಿಣ್ಣಿನ ಬೆತ್ತ
ಕೈಯಲ್ಲಿ ಹಿಡಕಂಡು
ಕಾವಿಜೋಳುಗಾ ತಂದಾ
ಕಂಕುಳ್ಗ ಸಿಕ್ಕಂಡು
ತುಂಬಿದ ಸೋಮಾರದಿವ್ಸ
ಹನ್ನೆರಡ್ಗಂಟಾ ಒಳಗಾ
ಆದಿಯ ಕಲ್ಯಾಣಕ
ಅಲ್ಲಮನಾಗಿ ಬಂದರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಧರೆಗೆ ದೊಡ್ಡವರು ಬಂದಂತಹ ಸಮಯದಲ್ಲಿ ನಾಲಿಗೆಯಿಲ್ಲದ ಎಮ್ಮ ಚಕಳದ ಗಂಟಾ ಏಳು ಸಾರಿ ಢಳೀರು ಢಳೀರು ಅಂತು. ಕಲ್ಯಾಣದ ಒಳಗಿದ್ದ ನೀಲಮ್ಮನವರಿಗೆ ಬಸವಣ್ಣನವರಿಗೆ ಗಲಾಟೆಯೊಳಗೆ ಆ ಶಬುದ ಗೋಚರವಾಗಲಿಲ್ಲ.

ಒಂದು ಪಾದವ ತೆಗೆದಾರಂತ
ಕಲ್ಯಾಣ ಮಂಟಪಕಾ
ಮಡಿಗಿದರಂತ
ಅಪ್ಪ ಮಡಗಿದ ಪಾದ
ಸಂಗಯ್ಯ ಕಂಡ್ಕಂಡ

ಧರೆಗೆ ದೊಡ್ಡವರ ಕಂಡಾನಂತ
ನೊರ್ಕನಲ್ಲ ಕಡಿದಾನಂತ ||ಸಿದ್ದಯ್ಯ ಸ್ವಾಮಿ ಬನ್ನಿ||

ಮಾಯಾವೇಷದಿಂದ ಬಂದಂತಹ ಮಹಾನುಭಾವ ಧರೆಗೆ ದೊಡ್ಡವರು ಅನ್ನೋದು ಗೊತ್ತಾಗಲಿಲ್ಲ ಕಟುಕರ ಸಂಗಯ್ಯನಿಗೆ. 'ಛೇ, ಬೀದಿಯೊಳಗೆ ಭಿಕ್ಷೆ ಮಾಡುವ ತಿರುಕ ಮನೆಮನೆಯೊಳಗೆ ಮುದ್ದೆ ಇಸ್ಕೊಂಡು ತಿಂದು ಮಾರಿಗುಡಿಲಿ ನಿದ್ದೆಮಾಡೋದು ಬಿಟ್ಟು, ಹೇಳ್ಕೆಕೇಳ್ಕೆ ಇಲ್ದೆ ಕಲ್ಯಾಣಕ್ಕೆ ನುಗುತ್ತಿದೆಯಲ್ಲಾ ಹುಚ್ಚ ಬಡ್ಡಿಮಗನೆ, ಕತ್ತಲಿ ಲಿಂಗಿಲ್ಲ, ಹಣಾಲಿ ಬಸ್ಮಿಲ್ಲ, ಈ ಲಿಂಗ ಮಂಟಪದ ಸ್ಥಳಕ್ಕೆ ನುಗ್ಗಬೊವ್ದ' ಅಂತೇಳಿ ಕತ್ತಿಗೆ ಕೈಯಾಕಿ ಆಚೆ ತಳ್ಳಿದ್ದಾರ, ಧರೆಗೆ ದೊಡ್ಡವರಾದರು ' ಏನಪ್ಪಾ ಕಟುಕರ ಸಂಗಯ್ಯ ಅನ್ನ ಉಂಡು ಆರು ದಿನವಾಯ್ತು, ಕಣ್ಣಿಗೆ ನಿದ್ರಾ ಮಾಡಿ ಮೂರು ದಿವ್ಸ ತುಂಬುತ್ತು, ಹಸಿದು ಹಣ್ಣಾಗಿ ಧಣಿದು ದಾವಾಗಿ ಕಲ್ಯಾಣ ಪಟ್ಣದಲ್ಲಿ ನಿಚ್ಚ ಬೋಜನ ಬಡಿಸ್ತಾರೆ ಅಂತ ಬಸವಣ್ಣನಿಗೆ ಗುರುವಾಗಿ ಬಂದಿವ್ನಿ' ಅಂದ. ಕಟುಕರ ಸಂಗಪ್ಪ ಹೇಳದ 'ಇರೆಂಬತ್ತು ಕೋಟಿ ಜೀವರಾಶಿಗಳಿಗೂ ನಮ್ಮ ಬಸವಣ್ಣನವರು ಗುರುಗಳು, ಅವರ್ಗೆ ಗುರುಗಳು ಅಂತ ಹೇಳಿತಿಯಲ್ಲ ಹುಚ್ಚುಬಡ್ಡಿ ಮಗ್ನೆ

ನೀನು ಲಿಂಗವಾ ತೋರಿಸಿದ್ರ
ಕಲ್ಯಾಣಕ್ಕ ಬಿಡ್ತೀನಪ್ಪಾ
ಕಟುಕರ ಸಂಗಯ್ಯ
ಆಡಿದ ಮಾತು
ನನ್ನ ಗುರುದೇವ ಕೇಳ್ಕಂಡು
'ಶಭಾಸ್ ನನಕಂದಾ'
ನಾ ಲಿಂಗವ ತೋರ್ಸದ್ರಾ
ಕಲ್ಯಾಣದೊಳ್ಕ ಬಿಟ್ಟಯಪ್ಪಾ ||ಸಿದ್ದಯ್ಯ ಸ್ವಾಮಿ ಬನ್ನಿ||

'ಬಿಡ್ತೀನಿ ಕಣೋ ಹುಚ್ಚು ಮುಂಡಾಮಗ್ನೆ' ಅಂದಾ. ಮಹಾನುಭಾವ ಧರೆಗೆ ದೊಡ್ಡವರು ಕಟ್ಟಿದ್ದ ಎಪ್ಪತ್ತೇಳು ಕುಡಿಜಡೆ ಮರಿಜಡೆಯನ್ನು ಕಿತ್ತುಒದರಿದ್ದಾರ. ಏಳೆಂಬತ್ತುಕೋಟಿ ಜೀವರಾಶಿಗಳ ಕತ್ತಲ್ಲಿ ಎಷ್ಟು ಲಿಂಗಿತ್ತು ಅಷ್ಟು ಲಿಂಗುವಾ ನಮ್ಮಪ್ಪಾಜಿಯವರ ಜಡಾ ಒಳಗಾ ದೊಳದೊಳನ ಸಂಗಯ್ಯನ ಸುತ್ತ ಕತ್ತಮಟ್ಟ ಸುರದೋಯ್ತು. 'ಈಗಲಾದ್ರು ಬಿಟ್ಟುಯಪ್ಪಾ ನನ್ನ ಕಲ್ಯಾಣಕ್ಕ' ಅಂದ್ರು. ಸಂಗಯ್ಯನ ಹೇಳ್ದ 'ತಿರ್ಕ ಬಡ್ಡಿಮಗ್ನೆ ಜಗತ್ತನಲ್ಲಿ ಒಬ್ಬನಿಗಿರಾದು ಒಂದ್ ಕಟ್ಲಿಂಗ್, ಇಷ್ಟ ಲಿಂಗವಾ ಈ ಜಡಾ ಒಳ್ಗ ಸುರಿಸಿದ್ದಯಲ್ಲಾ 'ಇದು ಹಸುರ್ ಸೊಪ್ಪಿನ ಲಿಂಗಾ' ಅಂದಾ.

ಕಟ್ಟ ಲಿಂಗಾ ತೋರಿಸದ್ರ
ಕಲ್ಯಾಣಕ್ಕ ಬಿಡ್ತಿನಪ್ಪಾ

ಶಬಾಸ್ ನನಕಂದಾ
ಕಟ್ಟಿದ ಲಿಂಗಾಬೇಡಾ
ಆತ್ಮಲಿಂಗವ ತೋರಸ್ತೀನಿ
ನೋಡಕಪ್ಪಾ ಅಂದರಂತೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಮಹಾನುಭಾವ ಎರಡು ಕೈಯನ್ನು ಹಾಕಿ ಎದೆಯನ್ನು ಸೀಳಿದ್ದಾರ. ಬಲ್‌ಚರಿ ಇಬತ್ತಿಗಟ್ಟಿ, ಎಡಚೊರಿ ಬಿಲ್ಪಪತ್ರದಳ, ನಟ್ಟ ನಡುವಿಲಿ ಜಗತ್ತೇ ಉರಿತಾ ಕುಂತದಾ. ಈ ಕಟುಕರ ಸಂಗಯ್ಯ ಕರ್ಮ ಸೇಸಕ್ಕ ಅಪ್ಪಾಜಿಯವರ ಆತ್ಮಲಿಂಗ ಕಾಣಲಿಲ್ಲ. ಅವರ ಬಿಂದ, ಕೀವು, ರಕ್ತ ಮಾತ್ರ ಕಾಣ್ತದ. 'ಛೆ, ಹುಚ್ಚಾ ಮುಂಡಾಮಗ್ನೆ', 'ಯಾಕಪ್ಪಾ' ಅಂದ್ರು. 'ಏನಾದರು ವಸ್ತು ಹೊಂಟೋದ್ರ ನನ್ನ ಕಲ್ಯಾಣದೊಳಗಿರುವ ಬಸವಣ್ಣವರ್ಗ ಅಪಕೀರ್ತಿ ಬತ್ತದಾ, ಮುಚ್ಚು ಹುಚ್ಚ ಬಡ್ಡಿಮಗ್ನೆ' ಅಂದಾ. ಎರಡು ಗಕ್ಕೆಯನ್ನು ಮುಚ್ಕಂಡ್ರು ಮಹಾನುಭಾವ. 'ಎಷ್ಟು ಬೋದ್ರು ತಿರ್ಕ್ ತಿನ್ನವರ್ಗ ಕೋಪಾ ಬರಾದಿಲ್ಲಾ' ಅಂತೇಳಿ. ಎಪ್ಪತ್ತೇಳು ಕುಡಿಜಡೆಯನ್ನು ಕುಣ್‌ಕಾಲ್ ಗಂಟಾ ಬಿಟ್ಕಂಡು, ಬಲದ ಪಾದವನ್ನು ಮತ್ತೊಂದು ಸಾರಿ ಎತ್ತಿ ಮಡ್ಗದಾಗ ಅತ್ತ್‌ಬಿಡ್ತು ಬಲ್ ಕೋಪಾ ಓಜಿ ಬಸಪ್ಪಾಜಿಗ. ಅಪ್ಪಾಜಿಯವರ ಎಪ್ಪತ್ತೇಳು ಕುಡಜಡೆಯನ್ನು ಮೂರ್ ಸುತ್ತ ಸುತ್ಕಂಡು

ಮುಸ್ಕಿಯನ್ನು ತೆಗೆದನಂತಾ
ಮೂರ್ ಗುದ್ದ ಗುದ್ದಿದನಂತಾ
ನಮ್ಮಪ್ಪ ಗುದ್ದಿದಾ ಗುದ್ದಾ...
ಕಲ್ಯಾಣದ ಒಳಗೆ
ಬಸವಣ್ಣನ್ಗ ಆರೇಟು
ನೀಲಮ್ಮನವರ್ಗ ಮೂರೇಟು
ಆರು-ಮೂರು ಒಂಬತ್ತೇಟು
ಕಲ್ಯಾಣದೊಳಗ ಬಿದ್ದವಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಧರೆಗೆ ದೊಡ್ಡವರು ಮೂರೇಟು ಗುದ್ದಸ್ಕಂಡು, ಎಮ್ಮೆ ಚಕಳ ಕಿತ್ತು ಬೀದ್‌ಗಿಟ್ರು. ಆ ಚಕಳ ಕೋಣನ ಮರಿಯಾಗಿ ಕವರ್ತ ನಿಂತ್ಕತು. ಅರುಳಯ್ಯನವರ ಬೂದಿ ಗುಡ್ಡಗಾ ಅಪ್ಪಾಜಿಯವರ್ನ ತಳ್ಬುಟ್ರು.

ಇಲ್ಲಿ ಬಸವಣ್ಣನವರು ಹೇಳಿದ್ರು. 'ಯಾಕ ನೀಲಾಂಬಿಕೆ ನನ್ನ ಆರೇಟ ಹೊಡ್ದೆ' 'ಸ್ವಾಮಿ ನಾನ್ಯಾಕ ಆರೇಟ ಹೊಡಲಿ, ನನ್ಗೂ ಮೂರೇಟು ಬಿತ್ತು ಪ್ರಭು.' ಮೇಲಕ್ಕ ಅಂತು ನೋಡಿದ್ರು. ಹನ್ನೆರಡು ಗಂಟೆಯಾಗಿತ್ತು. ಬಸವಣ್ಣಾ ಹೇಳ್ದ 'ಹನ್ನೆರಡು ಗಂಟೆಯೊಳಗಾ ಆದಿಕಲ್ಯಾಣಕ್ಕ ಅಲ್ಲಮ ಪ್ರಭುವಾಗಿ ಬತ್ತೀನಂತಾ ಹೇಳಿದ್ರು ಅಂದಿದ್ದೆಲ್ಲಾ ಕಡಾ ಬಾಕಲ್ಲಿ ಏನ್ ಅತಾಚುರ್‍ಯವಾಗಿದ್ದು ನಡಾ.' ಶರಣೆಯಾದ ನೀಲಮ್ಮ ಬಸವಣ್ಣನವರು ಬಂದ್ರು. 'ಏನಯ್ಯ ಕಟುಕರ ಸಂಗಯ್ಯ 'ಏನ್‌ಸ್ವಾಮಿ' 'ಯಾರ್ ಬಂದಿದ್ರು' 'ಯಾರೋ ಬೀದಿಯೊಳಗ

ಭಿಕ್ಷಾ ಮಾಡುವ ತಿರುಕ ಕೀವು ರಸ್ಕಿನೊಳಗ ಎಷ್ಟು ಹೇಳಿದ್ರು ಕೇಳ್ದೆ ಕಲ್ಯಾಣದೊಳಕ್ಕ ನುಗ್ಗತ್ತಿದ್ದಾ ಅಲ್ಲಿ ಬೂದಿಗುಡ್ನ ಒಳ್ಗ ಬಿದ್ದಿದ್ದಾನ ಸ್ವಾಮಿ'. ಶರಣೆಯಾದ ನೀಲಮ್ಮ ಎರಡು ಕರಣಗಳನ್ನು ಮುಚ್ಕಂಡ್ರು ಕಂದಾ...

ಇಂಥಾ ಕೆಲ್ಸ ಮಾಡಬೌದ
ನಿನ್ನ ವಂಶ ಅಳಾಗೋಗಾ ||ಸಿದ್ದಯ್ಯ ಸ್ವಾಮಿ ಬನ್ನಿ||

'ಅವ್ರ ಯಾರುಂತಾ ತಿಳ್ಕಂಡ ಅವರೇ ಧರೆಗೆ ದೊಡ್ಡವರು ಧರೆಯೆತ್ತಿದ ಮಾಮೂರ್ತಿ, ಬೂದಿಮುಚ್ಚಿದ ಕೆಂಡ ಭೂಲೋಕದ ಗಂಡ' ಅಂತೇಳಿ ಶರಣೆಯಾದ ನೀಲಮ್ಮ ಒಂದು ಪಾದ ಹಿಡಿದಿದ್ದಾರ. ಕಲ್ಯಾಣ ಪಟ್ಣದ ಬಸವಣ್ಣ ಒಂದ್ ಪಾದ ಹಿಡಿದಿದ್ದಾರ, ಇಬ್ಬರುಗೂ ಒಂದೊಂದು ಪಾದ ಕೈಗ ಬಂತು. ಕೀಲ್ ಕೀಲ್ ತೆಗದ್ರು, ಶಿರ್ಸ ನೀಲಮ್ಮನ ಕೈಗಾಯ್ತು, ನಡುರುಂಡಿ ಬಸವಣ್ಣ ಕೈಗಾಯ್ತು

ಮುಟ್ಟು ಮುಟ್ಟಸ್ತಾಮ
ಮಾಂಸವಾಗಿ ಕಳಕಂಡರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

'ಏನ್ ಮಾಡಾದು' ನೀಲಾಂಬಿಕೆ ಅಂದರು. 'ಸ್ವಾಮಿ, ನನ್ನ ಮುತ್ತಿನ ಸೆರಗನ್ನ ಮೇಲ್ ಪಟ್ಟವಸ್ತ್ರವನ್ನ ಹಾಸಿ, ಆ ಮಾಂಸವೆಲ್ಲ ತೆಗೆದು ಪಟ್ಟವಸ್ತ್ರದೊಳಗೆ ತುಂಬಿ.' ಪೊಟ್ಣ ಕಟ್ಟಿದ್ದಾರ. ಬಸವಣ್ಣನವರು ಆ ಮಾಂಸದ ಪೊಟ್ಣವನ್ನ ಎತ್ತಿ ತಲೆಮೇಲೆ ಮಡಿಕೊಂಡ್ರು. ಕೀವು ರಸ್ಕು ಕಟಬಾಯಿ ಮೇಲೆ ಹರಿತ್ತಿದ್ದಾದ' ಎಡದ ಕೈಲಿ ಬಲದ ಕೈಲಿ ತೊಡ್ಕತಿದ್ದಾರ. ಆದಿ ಕಲ್ಯಾಣದ ಗುರುಮಠಕ್ಕೆ ಬರುತ್ತಿದ್ದಾಗ ಆ ಮಠದೊಳಗೆ ಎಂಬತ್ತೇಳು ಕೋಟಿ ಶರಣರು ಕಲ್ಯಾಣ ಪಟ್ಣದಲ್ಲಿ ಊಟ ಮಾಡುತ್ತಿದ್ದಾರ. ಆ ಊಟ ಮಾಡೋರ ಮುಂದಾಕಾಣೆ ಬಸವಣ್ಣನವರು ಪೊಟ್ಣ ಹೊತ್ಕೊಂಡು ಬಂದ್ರು. ಊಟ ಮಾಡುವಂತ ಶರಣರೆಲ್ಲಾ ಊಟ ಬಿಟ್ಟು ಎದ್ದಬಿಟ್ಟರು, 'ಕಲ್ಯಾಣ ಕೆಟ್ಹೋಯ್ತು, ಲಿಂಗ ಕೆಟ್ಹೋಯ್ತು, ಜಂಗು ಕೆಟ್ಹೋಯ್ತು. ಕಾವಿ ಕಮಂಡಲವೇ ಕೆಟ್ಹೋಯ್ತು, ಈ ಕಲ್ಯಾಣ ಪಟ್ಣದ ಬಸವಣ್ಣ ಮಾಂಸದ ಪೊಟ್ಣ ಹೊತ್ಕೊಂಡು ಬರ್ತಿದ್ದಾನ ಇವನಿಗೆ ಹುಚ್ಹೊ ಬೆಪ್ಪೊ' ಎಂದು ಹೇಳಿ ಶರಣರೆಲ್ಲಾ 'ಬ್ರತಗೆಟ್ಹೋಗುಬುಟ್ಹೋ' ಅಂತೇಳಿ ಉಣ್ಣುತ್ತಿದ್ದ ಅನ್ನವನ್ನೆ ಬಿಟ್ಟಿಟ್ಟು ಕುಂದಕದ ನುಡಿ ನುಡಿಯುತ್ತಿದ್ದಾರೆ. 'ಯಾರು ಏನೇ ಅಂದ್ರು ನಾನು ಗುರಿ ಸಾಧಿಸಬೇಕು' ಎಂದೇಳಿ ಬಸವಣ್ಣನವರು ಆ ಮಾಂಸದ ಪೊಟ್ಣವನ್ನು ಹೊತ್ಕೊಂಡು ಬಂದು

ಎಡಚೋರಿ ಮಾದಾರಿ
ಚನ್ನಯ್ಯನ ಗದ್ದ
ಬಲಚೋರಿ ಹೊಲಾರ
ಹೊನ್ನಯ್ಯನ ಗದ್ದ
ನಟ್ಟನಡುವಿನಲ್ಲಿರೋದು
ಬಸವಣ್ಣನವರ ಉರಿಗದ್ದ ||ಸಿದ್ದಯ್ಯ ಸ್ವಾಮಿ ಬನ್ನಿ||

ಆ ಉರಿಗದ್ದ ಮೇಲೆ ಮಾಂಸದ ಪೊಟ್ನವನ್ನು ಮಡಗಿ, ಶರಣೆಂಬಾದ ನೀಲಮ್ಮ, ಕಲ್ಯಾಣದ ಪಟ್ನದ ಬಸವಣ್ಣ, ಮಲ್ಲಮ್ಮನ ಕೊಳಕ್ಕೆ ಸ್ನಾನಕ್ಕೆ ಹೋಗಿ ಸ್ನಾನ ಮಡಿ ಮಾಡಿ ಸಣ್ಣ ಮಡಿ ಉಟ್ಕೊಂಡು ಆ ಮಾಂಸದ ಪೊಟ್ನಕ್ಕೆ ಮಂಗಳಾರತಿ ಬೆಳಗಿದ್ದಾರೆ. ಉತ್ತರಕಾಂಡದಲ್ಲಿ ನಮ್ಮ ಅಪ್ಪಾಜಿ ಯಾವ ರೀತಿ ತಾವರೆ ಕಮಲದಲ್ಲಿ ಉದ್ಭವವಾಗಿದ್ದರೋ ಅದೇ ರೀತಿಯಾಗಿ ಆ ಮಾಂಸದ ಪೊಟ್ನದಿಂದ ಉದ್ಭವವಾಗಿದ್ದಾರೆ. 'ಬಸವಣ್ಣ, ನಿನ್ನ ಸತ್ಯಕ್ಕೆ ಒಪ್ಪಿದಿ ಭಕುತಿಗೆ ಮೆಚ್ಚಿದಿ' ಎಂದೇಳಿ ಆಶೀರುವಾದ ಕೊಟ್ರು. ಆಗ ಬಸವಣ್ಣನವರು ಧರೆಗೆ ದೊಡ್ಡವರಿಗೆ ಹೇಳುತ್ತಾರ 'ಸ್ವಾಮಿ, ನಿಮ್ಮನ್ನ ಹೊತ್ಕೊಂಡು ಬರೋದನ್ನ ನೋಡಿ ಮಾಂಸ್ದ ಪೊಟ್ನ ಅಂಥಾ ತಿಳ್ಕಂಡು ಲಕ್ಷದ ಮೇಲೆ ಎಂಬತ್ತಾರು ಸಾವಿರ ಗಣಂಗಳು ಊಟ ಬಿಟ್ಟು ಸ್ನಾನ ಮಡಿ ಮಾಡಕ ಮಲ್ಲಮ್ಮನ ಕೊಳ್ಕ ಹೊರಟೋದರು ಸ್ವಾಮಿ' ಎಂದರು. 'ಬಸವಣ್ಣ ಈ ಕಲ್ಯಾಣ್ದ ಜಂಗಮರು ಒಳ್ಳೆ ಶರಣರಲ್ಲ ಕಣಯ್ಯ, ಒಳ್ಳೇರು ಯಾರು ಕೆಟ್ಟೋರು ಯಾರು ಎನ್ನುವುದು ನಿನ್ಗ ಇನ್ನೂ ಗೊತ್ತಿಲ್ಲ ಕಣಯ್ಯ. ಮೂವತ್ತೂರು ಮಂದಿ ಮುನಾದಿ ಮುನಿಗಳು ಅರವತ್ತೂರು ಮಂದಿ ಜಂಗಮರು ಲಿಂಗ ಕಟ್ಕೊಂಡು ಕಲ್ಯಾಣದಲ್ಲಿ ವಾಸ ಮಾಡುತ್ತಾರಪ್ಪ. ಕಳ್ಳರ್ಯಾರು ಸತ್ಯಪುರುಷರು ಯಾರು ಎಂಬುದು ನಿನ್ನ ಕಣ್ಮುಂದೆ ತೋರಿಸುತ್ತಿನಿ' ಎಂದು ಕಲ್ಯಾಣದ ಬಸವಣ್ಣನ ಮಲ್ಲಮ್ಮನ ಕೊಳಕ್ಕೆ ಕರೆದಿದ್ದಾರ. ಚಕ್ರಮಟ್ಟೆ ಕಾಲಾಕೊಂಡು ಮಲ್ಲಮ್ಮನ ಕೊಳದ ಮುಂಭಾಗದಲ್ಲಿ ಕುಂತ್ಕೊಂಡ್ರು. ಸುತ್ತಾಮುತ್ತಾ ಇಳೆಂಬತ್ತು ಕೋಟಿ ಲಿಂಗಕಟ್ಕೊಂಡ ಜಂಗಮರ್ಗ ಹೇಳ್ದ 'ಏನ್ರಪ್ಪಾ ಶರಣಾತ್ಮರೆ ಈ ಕೊಳದಲ್ಲಿ ಸ್ನಾನ ಮಡಿ ಜಪ ಮಾಡುತ್ತೀರಲ್ಲ ಏಕ್ರಪ್ಪಾ' ಕಲ್ಯಾಣದ ಬಸವಣ್ಣ ಮಾಂಸ ಹೊತ್ಕೊಂಡದ್ದನ್ನ ಕಣ್ಣಾರೆ ನೋಡಿದೊ, ನಮ್ಮ ಲಿಂಗ ಕೆಟ್ಹೋಯ್ತು, ಜಂಗು ಕೆಟ್ಹೋಯ್ತು, ಜಪ ಮಣಿ ಕೆಟ್ಹೋಯ್ತು. ಈ ಲಿಂಗಗಳಿಗೆ ಮಲ್ಲಮ್ಮನ ಕೊಳದಲ್ಲಿ ಸ್ನಾನ ಮಾಡಿ ಜನ್ಮಸುದ್ದ ಆಗಬೇಕು.' ಧರೆಗೆ ದೊಡ್ಡವರು ಇದೇ ಸಮಯ ಅಂತ ತಮ್ಮ ಕತ್ತಲ್ಲಿದ್ದ ಲಿಂಗವ ಕಿತ್ತು ಕೊಳದಲ್ಲಿ ಇಟ್ರು. ಯಾವಾಗ ಧರೆಗೆ ದೊಡ್ಡವರು ಕಿತ್ತಿಟ್ರು ಇಳೆಂಬತ್ತು ಕೋಟಿ ಜಂಗಮರು ಕಿತ್ತು ಕಿತ್ತು ಇಟ್ರು. ಎಲ್ಲರ ಕತ್ತು ಬರಕತ್ತು ಆಗೋಯ್ತು. ಮಹಾನುಭಾವ ಆಕಾರ ಉಕಾರ ಮಕಾರವನ್ನು ಸೇರ್ಸಿ ಓಂಕಾರ ಎಂದ್ರು. ಅವರು ಕೊಳದೊಳಗೆ ಇಟ್ಟಿದ್ದ ಲಿಂಗ ಅವರ ಕತ್ಗ ಬಂದು ಕೂತ್ಕೊತು. ಇಳೆಂಬತ್ತು ಕೋಟಿ ಜಂಗಮರ್ಗ ಲಿಂಗ ಇಲ್ಲದಂಗಾತು. 'ನಮ್ಗ ಲಿಂಗ ಕೊಡಿ ಬುದ್ಧಿ' ಅಂದ್ರು. 'ಎಲ್ರುಗ ಲಿಂಗ ಕೊಡಕ್ಕಲ್ಲ ಕಲ್ಯಾಣಕ್ಕೆ ಬಂದಿರೋದು, ಪಂಚಲಿಂಗ ಐದು ಲಿಂಗ. ಅಂಚುಲಿಂಗ ಎರಡು ಲಿಂಗ. ಆತ್ಮಲಿಂಗ ಎರಡು ಲಿಂಗ ಜಗತ್ತಿಗೆ ಒಂಬತ್ತೇ ಲಿಂಗ.' ಇವ್ನ ಲಿಂಗಧಾರಣ ಮಾಡ್ತಿನಿ ಕೇಳ್ಕಳೀ

ಬಾರಪ್ಪ ನನಕಂದಾ
ನೀತೀಲಿ ಲಿಂಗವಂತಾ
ಜಾತೀಲಿ ಕುರುಬಗೌಡ

ಕುರುಬರ ಬೀರಯ್ಯನ್ಗ
ಒಂದ್ ಲಿಂಗ ಕೊಟ್ಟರಂತಾ
ಮಡಿವಾಳ ಮಾಚಯ್ಯ ಲಿಂಗ
ಕುಂಬಾರ ಗುಂಡಯ್ಯ ಲಿಂಗ
ಹಡಪದ ಅಪ್ಪಣ್ಣ ಲಿಂಗ
ಹೊಲಾರ ಹೊನ್ನಯ್ಯ ಲಿಂಗ
ಐದಲಿಂಗ ತಂದರಾಗ
ಪಂಚಲಿಂಗವ ಕೊಟ್ಟರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಮಾದಾರಿ ಚೆನ್ನಯ್ಯ ಲಿಂಗಾ
ದೇವಾಂಗ ದಾಸಯ್ಯ ಲಿಂಗಾ
ಎರಡು ಆತ್ಮಲಿಂಗ ತೆಗೆದು
ಇವೇಳು ಕಟ್ಲಿಂಗ್
ಒಕ್ಕಲಗೇರಿ ಒಳಗೆ
ಗಂಗಡಕಾರ ಗೌಡ್ಗ
ಆತ್ಮಲಿಂಗ ಕೊಟ್ಟವರೆ
ಹಾದಿ ಎಳವಾರದೊಳಗೆ
ಮೇಲು ಸಕ್ಕರಶೆಟ್ಟಿ
ಜಾತೀಲಿ ಉಪ್ಪಲಿಗಶೆಟ್ಟಿ
ಮಿಕ್ಕಾದ ಲಿಂಗವಂತರು
ಕಲ್ಯಾಣ ಪಟ್ನದೊಳಗೆ
ಕಲ್ಲು ವಡ್ಡರಾಗಿ
ಗೇಯ್ಕ ತಿನ್ನಿ ಅಂದಾರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಮಹಾನುಭಾವ ಧರೆಗೆದೊಡ್ಡವರು ಕಲ್ಯಾಣದ ಇಳಿಂಬತ್ತು ಕೋಟಿ ಜಂಗಮರ ಲಿಂಗ ಕಳೆದು ಕಲ್ಲು ವಡ್ಡರಾಗಿ ಗೇಯ್ಕ ತಿನ್ನಿ ಎಂದು ಶಾಪಕೊಟ್ಟು ಕಲ್ಯಾಣದ ಕಡೇ ಬಾಗಲಿಗೆ ಬಂದಾಗ

ಅಲ್ಲೊಬ್ಬ ಶಿವಶರಣ
ಬಾಚಿಬಸಪ್ಪಾಜೀ
ಮರಳಲ್ಲಿ ಲಿಂಗಮಾಡಿ
ಮರಳುಲಿಂಗ ದೇವರು ಅಂತೇಳಿ
ಶಿವಪೂಜೆ ಮಾಡುತಾನ ||ಸಿದ್ದಯ್ಯ ಸ್ವಾಮಿ ಬನ್ನಿ||

ಬಾಚಿಬಸಪ್ಪಾಜಿ ಧರೆಗೆ ದೊಡ್ಡವರಿಗೆ ಅಡ್ಡಬಿದ್ದು ಸಿಸುಮಗನಾಗುತ್ತೀನಿ ಅಂದಾ, 'ಕಂದಾ ನಿನ್ನ ಜನ್ಮ ಆರುಸತಿ ಹುಟ್ಟಿ ಆರುಸತಿ ಸತ್ತು ಜಲ್ಮ ಎತ್ತಿದ್ದರು ನಿನ್ನ ಕರ್ಮಸೇಸ ತೀರಿಲ್ಲ, ಮುಂದೆ ಕಲಿಯುಗದಲ್ಲಿ ನಾನು ಮಂಟೇಲಿಂಗಯ್ಯನಾಗಿ ಜನ್ಮ ಪಡೆದಾಗ ನೀನು ಏಳನೇ ಜಲ್ಮದಲ್ಲಿ ಮುದ್ದಮ್ಮನ ಹೊಟ್ಟೆಯಲ್ಲಿ ಕಿರಿಕಂಪಚಾರಿಯಾಗಿ ಹುಟ್ಟಪ್ಪ, ನಿನ್ನ ಜಲ್ಮಸುದ್ದಮಾಡಿ ಸಿದ್ದಪ್ಪಾಜಿಯಾಗಿ ಮಾಡ್ತೀನಿ' ಅಂದ್ರು ಧರೆಗೆ ದೊಡ್ಡವರು.

ಕಡೇ ಬಾಗಿಲನ್ನು ಬಿಟ್ಟು ಕಲ್ಯಾಣ ಪಟ್ಟಣಕ್ಕೆ ಬಂದ್ರು. ದಿವಾನರಾಗಿದ್ದ ರೇಚಪ್ಪಾಜಿ ಮೇಲೆ ದೃಷ್ಟಿ ಮಡ್ಗದ್ರು. 'ರೇಚಪ್ಪಾಜಿ ಕರಿಯೆಲಾ ಹಂಚ್ಕ ಮಾಡ್ ಮಡ್ಗಿವ್ನಿ ಕುಂತಿರ ಪ್ರಜೆಗಳ್ಗ ಹಂಚ್ಕಬಾಪ್ಪ' ಅಂದ್ರು ರೇಚಪ್ಪಾಜಿ ಎಲ್ಲನೂ ಕೊಟ್ಟು ಬಂದಿದ್ದಾರ ಗೊಟ್ ಅಡ್ಕ ತಂದು ಧರೆಗೆ ದೊಡ್ಡವರ ಮುಂದಾ ಮಡ್ಗಿ 'ನಿಮ್ಗ್ ಪ್ರಭು' ಅಂದಾ 'ಬಸವಣ್ಣಾ', ಅಂದ್ರು ಧರೆಗೆ ದೊಡ್ಡವರು 'ಕಲ್ಯಾಣದೊಳ್ಗ ವಂಚ್ನೆಯಿಲ್ಲಾ ಅಂದೆಲ್ಲಾ ಕರಿಯೆಲಾ ಗೊಟ್ ಅಡ್ಕ ನನ್ಗಕೊಟ್ಟು ಹಸರೆಲಾ ಪಟ್ಟೆಯನ್ನ ತನ್ನ ಕಿರಿಬೆರಳ್ಗ ಸೇರ್ಸ್‌ಕ್ಕಂಡಾ ಈ ರೇಚಪ್ಪಾಜಿ ಯಾರೇ ಆಗ್ಲಿ ಕಂದಾ ಊಟಕ್ಕ ಬಡ್ಸ್ ಬೇಕಾದರಾ ಕೆಟ್ಟದಾ ತಾ ಮಡಿಕಂಡು ಒಳ್ಳೆದಾ ಪರರಿಗೆ ಕೊಡಬೇಕು, ತನ್ನದು ನನ್ನದು ಎನ್ನುವ ಭಿನ್ನಬೇಧವಿಲ್ಲದೆ ಸರ್ವರೂ ಒಂದೇ ಅಂತೇಳಿ ಭರ್ಜರಿ ಹಂಚದವರ್ಗ ಮಾತ್ರ ಕೈಲಾಸದಲ್ಲಿ ಸ್ಥಳ ಕರಿಯೆಲಾ ಪಟ್ಟೆಯನ್ನ ವಂಚ್ನ ಮಾಡ್ದದಕಾ

ವಂಚಕಾರ ರೇಚಣ್ಣಾಂತಾ
ನಾಮಕರಣವಾಗಲೆಪ್ಪ ||ಸಿದ್ದಯ್ಯ ಸ್ವಾಮಿ ಬನ್ನಿ||

ಮಹಾನುಭಾವ ಧರೆಗೆದೊಡ್ಡವರು ಹೇಳಿದ್ರು 'ಈವೊತ್ತು ಕಲ್ಯಾಣ ಪಟ್ನ ಬರಿದು ಮಾಡ್ತೀನಿ, ನೀವು ಕೈಲಾಸಕ್ಕ ಹೊರಡ್ರಪ್ಪಾ, ಕರಿಯೆಲಾ ಪಟ್ಟೆಗೊಸ್ಕರಾ ಪಂಕ್ತಿಯಲ್ಲಿ ವಂಚ್ನೆ ಮಾಡ್ದದಕಾ ರೇಚಣ್ಣನಿಗಾ ಕೈಲಾಸದಲ್ಲಿ ಸ್ಥಳವಿಲ್ಲಾ ಮುಂದೆ ಕಲಿಯುಗದಲ್ಲಿ ರೇಚಪ್ಪಾಜಿ ಕಪ್ಪಡಿ ಕೈಲಾಸದಲ್ಲಿ ರಾಚಪ್ಪಾಜಿ ಅಂತಾ ಜಲ್ಮ ಎತ್ತಲೀ ಇದ್ನ ಎರಡನೇ ಕೈಲಾಸ ಮಾಡಿ'

ಮಗ್ಗ ಮರಳ್ಳಿ
ಹೆಗ್ಗಡದೇವನಕೋಟೆ
ಪಟ್ನ ಪಾಲಳ್ಳಿ
ಸರಗೂರು
ಅರೆಕರೆ ಬನ್ನೂರು
ಹಂಪಾಪೂರದ ಗ್ರಾಮ
ಚಂದಾಗಾಲದ ತೋಟ
ಚುಂಚನಕಟ್ಟೆ ತಾಲೂಕು
ಎಡತೊರೆ ಗ್ರಾಮ

ಮೈಸೂರು ದಿಸರಿಕಟ್ಟೆ
ಕಪ್ಪಡಿ ಕೈಲಾಸಾಂತ
ನಾಮಕರಣ ಮಾಡುತೀನಿ
ಮೈಸೂರು ದಿಸರಿಕಟ್ಟಿ ಜನಾನೆಲ್ಲಾ ಒಕ್ಕಲು ಮಾಡ್ತೀನೀ'ಅಂದ್ರು
||ಸಿದ್ದಯ್ಯ ಸ್ವಾಮಿ ಬನ್ನಿ||

**ಅಡಿಟಿಪ್ಪಣಿ**

ಮೋಳಿರಾಜಣ್ಣನವರ ಪಠ್ಯದಲ್ಲಿ ಕಲಾವಿದ ಕಲ್ಯಾಣ ಪಟ್ಟಣಕ್ಕೆ ಮಂಟೇಸ್ವಾಮಿಗಳು ಬರುವುದಕ್ಕೆ ಮತ್ತೊಂದು ಪ್ರಸಂಗವನ್ನೆ ಸೃಷ್ಟಿ ಮಾಡುತ್ತಾನೆ. ಗುರುವಿಲ್ಲದ ಗುಡ್ಡನಾದ ಬಸವಣ್ಣನವರು ಪಟ್ಟದ ಮಂಚದ ಮೇಲೆ ಮೊಕ್ಕಣಾಗಿ ಮಲಗಿಕೊಂಡಾಗ ನೀಲಮ್ಮನವರು ಬಂದು ಕ್ಷೇಮ ಸಮಾಚಾರವನ್ನು ವಿಚಾರಿಸುತ್ತಾರೆ. ಬಸವಣ್ಣನವರು ಇಂದಿನಿಂದ ನಾನು ಲಿಂಗಮಣಿ ತೊಳೆಯುವುದಿಲ್ಲ, ಲಿಂಗಪೂಜೆ ಮಾಡುವುದಿಲ್ಲ, ನನಗಿಂತ ಮಿಗಿಲಾದ ಗುರುವಿನ ದರುಶನ ವಾಗುವ ತನಕ ಅನ್ನ ಆಹಾರ ಸೇವಿಸುವುದಿಲ್ಲ ಎಂದು ಹೇಳುತ್ತಾರೆ. ಬಸವಣ್ಣನವರು ಅನ್ನ ಆಹಾರವನ್ನು ತ್ಯಜಿಸಿದ್ದರಿಂದ ಇರೆಂಬತ್ತು ಕೋಟಿ ಜೀವರಾಶಿಗಳು ಅನ್ನ ಆಹಾರವನ್ನು ತ್ಯಜಿಸಿಬಿಡುತ್ತವೆ. ಇದರಿಂದ ಚಿಂತಿತಳಾದ ನೀಲಮ್ಮ ಕಲ್ಯಾಣದ ಕಡೆಬಾಗಿಲಿನಲ್ಲಿ ಕಬ್ಬಿಣದ ಸರಪಣಿ ಹಾಕಿಕೊಂಡು ಆತ್ಮಹತ್ಯೆಗೆ ಪ್ರಯತ್ನಿಸುತ್ತಾಳೆ. ಆಗ ಪ್ರತ್ಯಕ್ಷವಾದ ಧರೆಗೆ ದೊಡ್ಡವರು ಬಸವಣ್ಣನವರಿಗೆ ಗುರುವಾಗಿ ಆದಿಕಲ್ಯಾಣಕ್ಕೆ ಹನ್ನೆರಡು ಗಂಟೆಗೆ ಬರುತ್ತೇನೆ, ನಾನು ಬಂದಾಗ ನಾಲಿಗೆ ಇಲ್ಲದ ಎಮ್ಮೆ ಚಕಳದ ಗಂಟೆ ಶಬುದು ಮಾಡುತ್ತದೆ. ಇದನ್ನು ಅರಿತು ನೀವು ನನ್ನನ್ನು ಬರಮಾಡಿಕೊಳ್ಳಬೇಕೆಂದು ವರಕೊಡುತ್ತಾರೆ.

## ೩.

# ಚೆನ್ನಾಜಮ್ಮನನ್ನು ಪಡೆದ ಸಾಲು

ಕಲ್ಯಾಣ ಬಿಟ್ಟರಂತೆ
ವಿಜಯನಗರಕ್ಕ ದಂಯವಾದರಂತೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಬ್ಯಾಸ್ಗ ಬಿಸ್ಲು ಅರಾಕಲ್ಲಿನ ಮೇಲಾ ಸ್ವಾಮಿ ಹುಲ್ಲೆ ಚರ್ಮಹಾಸಿಕೊಂಡು ಹುಲಿಯ ಚರ್ಮಹೊದ್ದುಕೊಂಡು ಬಲಮೊಗ್ಗಲಾಗಿ ಪವಾಡಿಸಿದಾಗ ಆ ಅರಾಕಲ್ಲೇ ಕೊಡೇಯಾಗಿ ವೇಗದಲ್ಲಿ ಬೆಳಿತಂತಾ, ಕಿಡಗಣ್ಣ ರಾಚಪ್ಪಾಜಿಯವರಿಗೆ ನಿದ್ದೆ ಬರನಿಲ್ಲಾ ಇಲ್ಲೊಂದು ವಿಜಯನಗರ ಅಂತ ಇದ್ದದಾ ಅಲ್ಲಿ ಗೋಲಿ ಗೆಜ್ಜನಾದ್ರು ಆಡಿಕೊಂಡು ಬರಬೇಕೆಂಬುದಾಗಿ ವಿಜಯನಗರಕ್ಕೆ ಬರುತಾರ ರಾಚರಾಯ್ರು ವಿಜಯನಗರ ಕೋಟೆ ಒಳಗಾ ನೂರಾರು ಮಂದಿ ಗಾರ್ಡ್ಗಗರು ಇದ್ದಾರ. ಹೇಣಕೊಂಯ ಗಾರ್ಡ್ಗ, ರಕ್ತ ಬೇದಿ ಗಾರ್ಡ್ಗ, ರಣವ್ಹೋಡಿ ಗಾರ್ಡ್ಗ ಈ ಗಾರ್ಡ್ಗಳ ಮಕ್ಕಳೆಲ್ಲಾ ಅಲ್ಲಿ ಗೆಜ್ಜಿಗ ಆಡ್ತಿದ್ದಾರ, ರೇಚಪ್ಪಾಜಿಯವರು ನಾಗಬೆತ್ತವನ್ನು ಕೈಲಿ ಹಿಡ್ಕಂಡು, ನಾಲ್ಕಪಾದದ ಜೋಳ್ಗ ಕಂಕಳ್ಗ ಹಾಕ್ಕಂಡು ಬರುತ್ತಿದ್ದಾರ. ಇಳಾಗೆಜ್ಜ ಆಡದ ನೋಡ್ದ ರೇಚಪ್ಪಾಜಿ. 'ನಾನು ಸ್ವಲ್ಪ ಬರ್ಲ ಬುದ್ದಿ' ಅಂದಾ. 'ಛೆ! ನಿನ್ನ ಜೊತಾ ಆಳ ಕರ್ಕಬರ್ಲಾ' 'ಇಲ್ಲಿತನಕ ಗುರು ಇದ್ದರು ಇಲ್ಲಿಂದಾಚ್ಗ ನಾನೊಬ್ಬನೇ' ಅಂದ್ರು ರೇಚಪ್ಪಾಜಿ. ಗಾರ್ಡ್ಗ್ರಾ ಮಕ್ಕಳ್ಗ ಕೋಪ ಅತ್ಬುಡ್ತು. 'ನಾವೆಲ್ಲ ಒಂದಾದ ಮೇಲಾ ಇವನ್ನೊಬ್ಬನೇ ಒಂದಾದರ ಇವ ಗೆದ್ದಾಗ ತಾನೇ ಆಯ್ತು' ಚಿನ್ನಿಕೋಲ್ ಹೊಡದ್ರು. ಹೊಡೆದ ಚಿನ್ನಿಕೋಲ ಎಡಗೈನಲ್ಲಿ ಆತ್ಕಂಡಾ ರಾಚಪ್ಪಾಜಿ. 'ಈಗ ನಾನ್ ಒಡತೀನಿ ನೋಡಕಳ್ರಲಾ' ಅಂದಾ ರಾಚಪ್ಪಾಜಿ. ನಾಲ್ಕಪಾದ್ ಜೋಳ್ಗ ದಂಡೆಲಿ ಮಡಗಬಿಟ್ಟು, ಕಪ್ಪುಧೂಳ್ತ ತೆಗ್ದು ಚಿನ್ನಿಕೋಲಗಿಟ್ಟಿದ್ದಾನ.

ಅಪ್ಪಾಜಿಯವರ ನೆನದನಂತಾ
ಚಿನ್ನಿಕೋಲ ಹೊಡೆದನಂತಾ
ಹೊಡದಂತಾ ಚಿನ್ನಿಕೋಲು
ನೂರು ಮಂದಿಗಾರ್ಡರ ಮಕ್ಕಳ
ಮೊಖದಲ್ಲಿ ನುಗ್ಗಿ
ಮೂಗಲ್ಲಿ ಮರೆಯಾಗಿ
ಮೋರೋಂತಾ ಹೋಯಿತಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಮೂಗಲಿ ಮರೆಯಾಗಿ ಮೊರ್‍ರೊಂತಾ ಹೊಯ್ತು. ನೂರ್ ಮಂದಿ ಗಾರ್‍ರ್ನರ ಮಕ್ಕಳು ಹುಡುಕ್ತಲಾರ್ದೆ ಸುಸ್ತಾಗಿ ಬಿದ್ದುಹೋದ್ರು. ಗಾರುಡಿಗರ್‍ಗಾ ಸುದ್ದಿ ಹೊಂಟೊಯ್ತು, 'ಏನ್ರಾ, ಬೀದಿಯೊಳಗಾ ಭಿಕ್ಷಾ ಮಾಡುವ ತಿರುಕ ನಾಗಬೆತ್ತ ಸಿಕ್ಕಿಕ್ಯಾಂಡು ನಾಲ್ಕುಪಾದ ಜೋಳ್ಗೆ ಹಾಕ್ಯಂಡು ನಮ್ಮೂರಗ ಬಂದು ಆಡ್ತನ ನಡ್ರಿಲಾ' ಅಂದರಂತಾ. ಆಗ ಗಾರ್‍ರ್ನರ ದೇವತೆ ದಂಡಕ್ಕ ಓಡೋಡಿ ಬಂದಂರಂತೆ.

ನಗಾರಿ ನೌಭತ್ತು
ಉರಿಡೋಲು ಉರದಮ್ಮೆ
ಹಗಲಬತ್ತಿ ಉದರ್‌ಬಾಣ
ಬಾಣ ಬಿರುಸು ಬಿಟ್ಕಂಡು
ಹಿಂದಾ ಸೂಳರಾ ಮೇಳಾ
ಮುಂದಾ ಗೊಲ್ಲರ ಪಾರ
ಒಂದು ಕಾಕಾ ಹೊಡೆದರಂತಾ
ಥೈ! ತಕ್ಕಾ ಕುಣಿದರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಯಾವಾಗ ಒಂದ್ ಕಾಕಾ ಒಡೆದು ಕೈಮುಕ್ಕಂಡು ಗಾಣಿಗರ ದೇವತೆ ವಾಲಾಡ್ಕಂಡು ಬಂದಿದ್ದಾಳ. 'ಛೆ! ನನ್ನ ಕರ್‍ದ ಕಾರಣವೇನು' ಅಂದಿದ್ದಾಳ. ಆಗ ಗಾರ್‍ರ್ನರು ಹೇಳಿದ್ದಾರ. 'ಮಾರಮ್ಮ ನಮ್ಮ ನಮ್ಮ ಕೀರ್ತಿ ನಾಮೆ ಉಳಿಸಬೇಕು ಯಾವನೊ ಹುಚ್ಚು ಮುಂಡೇಮಗ ಬಂದು ನಮ್ಮ ಗಾರ್‍ರ್ನರ ಮಕ್ಕಳ ಸೋಲ್ಸಿದ್ದಾನ'. ಗಾರ್‍ರ್ನರ ದೇವತೆ ಹೇಳಿದ್ದಾಳೆ 'ಲೈ! ಹಾಕ್ರಲಾ ಮೋಡಿ

ಬಾಳಹಣ್ಣು ನುಂಗಾಗ
ಎಡ್ಕ ಬಲ್ಕ ನುಂಗಿತೀನಿ
ಮಿಣಕಹಣ್ಣು ಕಡಿಯಾಗ
ಕಟ್ಮು-ಕಟ್ಮುನ ಕಡಿತೀನಿ ||ಸಿದ್ದಯ್ಯ ಸ್ವಾಮಿ ಬನ್ನಿ||

ಯಾವಾಗ ಮಾರಮ್ಮ ಆಡ್ದಮಾತ್ ಕೇಳ್ಕಂಡು ಗಾರ್‍ರ್ನರೆಲ್ಲಾ ಬಂದು ಒಂದ್ ಕಂಡ್ಗ ಇಟ್ಟಿಗ ಪುಡಿ, ಒಂದ್ ಕಂಡ್ಗ ಮಸಿಪುಡಿ, ಒಂದ್ ಕಂಡ್ಗ ರಂಗೋಲಪುಡಿ, ಐದು ಮಂಡಲವನ್ನು ಒಡೆದಿದ್ದಾರೆ. ಮೊದ್ಲನೇ ಮಂಡಲದಲ್ಲಿ ನಿಂಬಿಯಣ್ಣು ಮಂತ್ರಿಸಿ ಮಡ್ಗಿದ್ದಾರ. ಎರ್‍ಡ್ನ ಮಂಡಲದಲ್ಲಿ ಕೋಳಿಮೊಟ್ಟೆ ಮಂತ್ರಿಸಿ ಮಡ್ಗಿದ್ದಾರ. ಮೂರನೇ ಮಂಡಲದಲ್ಲಿ ಮುಕ್ಕಣಮಾರಿಯಾದ ತೆಂಗಿನಕಾಯಿ ಮಂತ್ರಿಸಿ ಮಡ್ಗಿದ್ದಾರ. ನಾಲ್ಕನೇ ಮಂಡಲದಲ್ಲಿ ನೂರ ರೂಪಾಯಿ ಮೊತ್ತಕಾಣ್ಕ ಮಡಗಿದ್ದಾರ. ಐದನೇ ಮಂಡಲದಲ್ಲಿ ಗಾರ್‍ಡ್ಗರ ದೇವತಿ ಕುಂತಿದ್ದಾಳ. 'ಎತ್ರಲಾ ಮೋಡಿಯ' ಅಂದಳು.... ಕಿಡಗಣ್ಣು ರೇಚಪ್ಪಾಜಿ ಗುರು ಹೇಳಿದ್ದ ನೆನಪ್ಸಕ್ಕಂಡ್ರು: 'ಮೂಡ್ಲಾಗ ಹೋಗು, ತೆಂಕ್ಲಗೋಗು, ಪಡ್ಲಗೋಗು, ಬಡ್ಲಾಗೋಗ್‌ಬ್ಯಾಡ' ಅಂದ್ರು. ಆ ಗುರುವಾಕ್ಯ ಮೀರಿ ಬಂದದ್ಕ ಇದೇ ಸಾಕ್ಷಿ ಅಂತೇಳಿ

ಅಣ್ಣನಾಸೆ ನನಗಿಲ್ಲ
ತಮ್ಮನಾಸೆ ನನಗಿಲ್ಲ
ತಾಯಾದರೂ ಇಲ್ಲ
ತಂದೆಯಾದರೂ ಇಲ್ಲ
ಯಾರು ಇಲ್ಲದ ಅನಾಥರ್ಗ
ನಿನ್ನದೇ ಸಕಾರಪ್ಪ ||ಸಿದ್ದಯ್ಯ ಸ್ವಾಮಿ ಬನ್ನಿ||

ಎರಡು ನೇತರದಲ್ಲಿ ಕಣ್ಣೀರ ತುಂಬ್ಕಂಡ. ಯಾವಾಗ ಅತ್ತಂತಾ ಕಣ್ಣೀರು ಧರೆಗೆ ದೊಡ್ಡವರ ಎದಮೇಲಾ ಧಾರಾವತಿಯಾಗಿ ಹರಿತು. ಬೆಚ್ಚಬೇಡ ನನಕಂದ ಕಿಡಗಣ್ಣ ರಾಚಪ್ಪಾಜಿ ಬೆದ್ರಬೇಡ. ಕಪ್ಪು ಧೂಳ್ತವನ್ನು ತೆಗ್ದು ಮಂಡಲಕ್ಕೆಲ್ಲಾ 'ಉಫ್ಪೋ' ಅಂತಾ ಉರುಬಿದ್ವಾರ.

ಒಂದು ಕಾಕಾ ಹೊಡದನಂತಾ
ಇಂಬಿಹಣ್ಣು ಒದ್ದನಂತಾ
ಒದ್ದಂತಾ ಇಂಬಿಹಣ್ಣು
ಆ ಗಾರ್ದರ ದೇವತಿ
ಹಿಂದೆ ರಪ್ಪನಾ ಬಿತ್ತು
ರಪ್ಪಾನ ಬಿದ್ದೇಟ್‌ಗೆ ಮಾರಿ
ಬೊದ್ಕನ ರಕ್ತ ಕಕ್ಕುತಾಳ ||ಸಿದ್ದಯ್ಯ ಸ್ವಾಮಿ ಬನ್ನಿ||

ಉಗ್ರಕೋಪ ತಾಳಿದನಂತಾ
ಕೋಳಿಮೊಟ್ಟೆ ಒದ್ದನಂತಾ
ಕೋಳಿಮೊಟ್ಟೆ ಒದ್ವಾಗ
ಉರಿ ಉರಿ ಅಂದಳಂತಾ
ತುಮ್ಮಾ ತುಮ್ಮಾನ ಕುಣದಾಳಂತಾ
ಮುಕ್ಕಣ್ಣಾ ಮಾರಿ
ಒದ್ದಾ ತೆಂಗಿನಕಾಯಿ
ಮಾರಿ ಎದಗ ರಪ್ಪಾಂತ ಬಿತ್ತು
ಮನೆದೇವ್ರು, ಕುಲದೇವ್ರು
ನಿಮ್ಮ ಪಾದ ಕೊಡಿ ||ಸಿದ್ದಯ್ಯ ಸ್ವಾಮಿ ಬನ್ನಿ||

'ಹೊಡೆಯಬೇಡಿ ನನ್ನಪ್ಪ, ತಡ್ಕನಾರಿ. ಮನೆದೇವ್ರು, ಕುಲದೇವ್ರು, ಅನ್ನಾದು ಗೊತ್ತಿಲ್ಲಾ. ಯಾವ್ ದೇಶದ ಜಂಗಮರ ಮೊದ್ಲು ಹೇಳ್ ಕೊಡಿ' ಅಂದ್ಳು. ಆವಾಗ ನಮ್ಮಪ್ಪಾಜಿ ಮೊತ್ತಕಣ್ಣಾ ತೆಗ್ದು ಮುತ್ತನ ಜೋಳ್ಗ ಹಾಕ್ಕಂಡ್ರು.

ಆ ಕೆಟ್ಟ, ದೇವ್ರು ಜುಟ್ಟು
ಜಾಡಿಸಿ ಹಿಡ್ಕರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

'ನಾನು ಮಾಟ್ಟಕೊಟ್ಟದ ಕತ್ರ ಮಂಟೇದಲಿಂಗನ ಮಗ' ಅಂದ್ರು. ಗಾರ್ಡ್ಗಗರ ದೇವತ ಹೇಳ್ತ, 'ಬುದ್ಧಿ, ಮೊದಲೇ ಇಂತಾವರು ಅಂತಾ ಗೊತ್ತಾಗಿದ್ದರ ಕೆಬ್ಬಾಕಟ್ಟವೊಳಗ ಕಂಡಾಯಗಳ್ಗ ಹೂ ಹೊಂಬಾಳ ಮಾಡಿ, ಕವಡ ಸಾಂಬ್ರಾಣಿ ಹಾಕಿ ಕಿಡಗಣ್ಣ ರೇಚಪ್ಪಾಂತ ಹೇಳಿ ನನ್ನ ಮನಗೇ ಕರ್ಸಕತಿದ್ದಿ, ಮೋಡಿ ಹಾಕಕಾ ಹೋದ ಗಾರ್ಡ್ಡರ ಸೂರಾರ ಮಂದಿ ಸತ್ತ ಮಲಗಿರುವಾಗ ಎಲ್ಲರಕ್ಕಿಂತ ಹಿರೀ ಗಾರ್ಡ್ಗಗರ ಮಗಳು ಹಿರಿಯವಳು ಹೀರಾಮಣಿ ಅಪ್ಪಾಜಿಯವರ ಪಾದಕ್ಕ ಶರಣ ಮಾಡಿ 'ನನ್ನಿಂದ ಏನ್ ಆಗ್ಬೇಕು ಮಾಡ್ತಿನಿ ಈ ಗಾರ್ಡ್ಗಗರೆನೆಲ್ಲಾ ಬದುಕ್ಸು ಕೊಡಿ ಅಪ್ಪಾಯ್ಯ' ಅಂದಳ್ಳು.

ಹೊನ್ನಿಗು ಬಂದಿಲ್ಲ
ಒಡವೆಗೂ ಬರಾದಿಲ್ಲಾ
ಮುತ್ತು ರತ್ನಕ ಬಂದಿಲ್ಲ
ಈ ಗಾರ್ಡ್ಡರ ಮಕ್ಕಳ್ನೆಲ್ಲಾ
ಬದುಕ್ಸ ಕೊಟ್ಟರಾ
ಕಿರಿ ಮಗಳ
ನನ್ನ ಸಿಸು ಮಗಳಾಗಿ
ನನ್ನ ವಶಕ್ಕಾದರು ಕೊಟ್ಟಿಯವ್ವಾ ||ಸಿದ್ದಯ್ಯ ಸ್ವಾಮಿ ಬನ್ನಿ||

'ಕೊಡ್ತಿನಿ ಮಾಪ್ರಭು' ಅಂದ್ಲು. ಯಾವಾಗ ಕಪ್ಪುಧೂಳ್ತವನ್ನು ಇಟ್ಟಿದ್ದಾರ. ಗಾರ್ಡ್ಡರೆಲ್ಲಾ 'ಉಸ್ಸೋ' ಅಂತಾ ಎದ್ದು ಕುಂತಿದ್ದಾರ. ಅಪ್ಪಾಜಿ ಹೇಳ್ತ 'ನನ್ಗ ಮೋಡಿಯಾಕದಾಗೆ ನರ ಮಾನವರಿಗೂ ಮೋಡಿ ಹಾಕ್‌ಬೌದು ರಕ್ತದ ಸೊಕ್ಕಿನ ಮೇಲೆ ನರ ಮಾನವರು ಬರಬೌದು. ಎತ್ತಲಾರದೆ ರಕ್ತ ಕಕ್ಕಾ ಸಾಯ್‌ಬೌದು. ಆದ್ದರಿಂದ ನಿಮ್ಮ ಗಾರ್ಡ್ಗಗರ ಜಾತಿವೊಳಗ ಹಾಕಿದ ಮೋಡಿ ಎತ್ತಬೇಕೆ ಹೊರತು ಮೋಡಿ ಮಾತ್ರ ಹಾಕಕಿಲ್ಲಾಂತೇಳಿ' ತಾಮ್ರ ತಗಡು ಚಪ್ಪೋಡು ಬರಸ್ಕಂಡ್ರು, 'ಇಲ್ಲಿತನಕ ಹೀರಾಮಣಿಯಾಗಿದ್ದಳು. ಇಲ್ಲಿಂದೀಚಗ 'ಕಿರಿ ಚೆನ್ನಾಜಮ್ಮ' ಅಂತಾ ಇವಳ್ಗ ನಾಮಾಂಕಿತವಾಗಲಿ. 'ಇಲ್ಲಿ ತನಕ ನಿಮ್ಮ ಮಗಳಾಗಿದ್ದ ಇಲ್ಲಿಂದೀಚೆಗೆ ನಿಮ್ಮ ಮಗಳಲ್ಲ ನಮ್ಮ ಮಗ' ಅಂತೇಳಿದರು ರಾಚಪ್ಪಾಜಿ.ಗಾರುಡಿಗರು ಮಗಳನ್ನು ಧಾರೆಯೆರೆದು ಕೊಟ್ಟಿದ್ದಾರೆ.

**ಅಡಿ ಟಿಪ್ಪಣಿ**

ಇನಕಲ್ಲು ಮಹಾದೇವಯ್ಯನವರ ಪಠ್ಯದಲ್ಲಿ ಗಾರುಡಿಗರ ಒಂದು ಸವಾಲು ತುಂಬಾ ಫ್ಯಾಂಟಸಿಯಾಗಿದೆ. ಉದಾಹರಣೆಗೆ- ಹರಿಯುವಂತ ನದಿಯ ಮೇಲೆ ಪಾದಕ್ಕೆ ಚಿಡಾಮೆಟ್ಟಿಕೊಂಡು, ಬಾಳೆ ಎಲೆ ಬಲಗೈಯಲ್ಲಿ ಹಿಡ್ಕಂಡು, ಆನೆ ಉದ್ದದ ಆಳದ ನೀರಿಗೆ ಹೋಗಿ ಅಂಗಡಿ

ಮಡಗುತ್ತೀವಿ ನೀನು ಬಂದು ಯಾಪಾರ ಸಪಾರ ತಕ್ಕಬೇಕು ಈ ರೀತಿ ಜದಿ ನೀರಲ್ಲಿ ಬರುವಾಗ ನಿನ್ನ ಅಂಗಾಲು ನೀರಾಗಬಾರದು ಆಗ ಯಾಪಾರಕ್ಕ ಕಾಸುಕೊಡಬೇಡ ದುಡ್ಡುಕೊಡಬೇಡ ನೀ ಕೇಳಿದ ಯಾಪಾರವ ನಾವೇಕೊಡುತೀವಿ

೪

# ಸಖರಾಯಪಟ್ಣದ ಸಾಲು

ವಿಜಯನಗರ ಬಿಟ್ಟರಂತಾ
ಸಖರಾಯನ
ಪಟ್ಣಕ್ಕ ಬಂದರಂತಾ ॥ಸಿದ್ದಯ್ಯ ಸ್ವಾಮಿ ಬನ್ನಿ ಸಖರಾಯನ ಪಟ್ಣದೊಳಗಾ
ಲಿಂಗಯ್ಯ ನೀವೇ ಬನ್ನಿ॥

ಅರಳಿಕಟ್ಟ ಮೇಲೆ ಕುಂತು ಹುಲ್ಲೆ ಚರ್ಮ ಹಾಸಿ, ಇಬತ್ತಿಗಟ್ಟ ಹರಡಿ, ಕಂಡಾಯ ತಗೆದು ಭೂಮಿಗೆ ನಾಟವರೇ ಪರಂಜ್ಯೋತಿಯವರು. ಉತ್ತರದಿಕ್ಕ ಪಾದ ದಕ್ಷಿಣಕ್ಕ ತಲಾ ಏಕವಾಗಿ ಮಲಗಿ ಜಾಮುನಿದ್ರೆ ಮಾಡುತಾರ. ಬೆಳ್ಳಿಮೂಡಿ ಬೆಳಕರಿದು ಬಂತು. ಸಖರಾಯನ ಪಟ್ಣದ ರಾಜ ಮಕ್ಕಳ್ಗ ಹುಟ್ಟಿದಬ್ಬ ಮಾಡ್ಬೇಕು, ನಾಮಕರಣ ಮಾಡ್ಬೇಕು ಅಂತಾ ಡಂಗೂರ ಸಾರ್ಸವನೆ. ಭಟ್ಟರು ಯಾವ ರೀತಿ ಸಾರ್ತಿದ್ದಾರ 'ಇವೊತ್ತು ಮಹಾರಾಜನ ಮಕ್ಕಳ್ಗ ನಾಮಕರಣ ದಾಸಯ್ಯ ಜೋಗಯ್ಯ, ಹರುಕ ತಿರುಕ, ಗುರುವ, ಗುಡ್ಡ, ಭಿಕ್ಷುಕನಾದ್ರು ಸರಿಯೇ ಭಿನ್ನ ಬೇದವಿಲ್ಲದೆ ಭೋಜನಕ್ಕೆ ದಯಮಾಡ್ಬೇಕು' ಇದನ್ನಾ ಮಹಾನುಭಾವ ಅರಳಿಕಟ್ಟೆ ಮೇಲಾ ಕುಂತು ಕೇಳಸ್ಕಂಡ್ರು.

ಈ ಮಹಾರಾಜನ ದುಡವ
ನೋಡಬೇಕು ಅದಂರಂತಾ
ಆ ಭಿನ್ನಬೇದದ ಚೆಂದ
ಪರಿಶೋಧ ಆಗಬೇಕು ಅದರಂತಾ ॥ಸಿದ್ದಯ್ಯ ಸ್ವಾಮಿ ಬನ್ನಿ॥

ಮಹಾರಾಜನ ಮನೆಯಲ್ಲಿ ಚೆಪ್ಪನ್ನಾರು ದೇಶದ ರಾಜರು ಭೋಜನ ಮಾಡ್ಬೇಕು ಅಂತಾ ಕುತಿದ್ದಾರ. ಮಹಾನುಭಾವ ಬಂದು ಎಡಗಡ ಕಂಡಾಯ ಮಡ್ಗಿ, ಬಲಗಡ ತಂಬೂರಿ ಯನ್ನ ಇಟ್ಟು ಊಟಕ್ಕ ಕೂತು, ಒಂದು ತುತ್ತು ತೆಗೆದು ಬಾಯ್ಗ ಹಾಕಿತ್ತಿದ್ದಾರ, ಕೈಗೊರುತ್ತಿದ್ದಾರ

ಮೈಲ್ಗ ಕೈ ತಕ್ಕಂಡ್ರಂತಾ
ಮೈ ಕೈಗೆಲ್ಲಾ ಒರಿಸಿದರಂತಾ ॥ಸಿದ್ದಯ್ಯ ಸ್ವಾಮಿ ಬನ್ನಿ॥

ಊಟಮಾಡುತ್ತಿದ್ದ ರಾಜರೆಲ್ಲಾ ಮೇಲ್ಕ ಎದ್ದ ಬಿಟ್ರು. 'ಛೆ ಬೀದಿಯಲ್ಲಿ ಭಿಕ್ಷ ಮಾಡುವ ತಿರುಕ್ರ ತಕ್ಕ ಬಂದು ಸಭಾ ಒಳಗ ಕುಂದ್ರಸಿ ಸುಟ್ಟಿಕ್ಕುವಾಗ ಗಂಗೆಯನ್ನು ಹಾಕಿ ಕೈ ತೊಳಿಯದೆ

ಮೈಕೈಗ ಒರ್ಸಕಳದಾ, ನಮಗ ಅವಮಾನವಾಯ್ತು' ಅಂತಾ ಮೇಲ್ಕ ಎದ್ದು ನಿಂತರು. ಮಾರಾಜ ಹೇಳ್ದ 'ಏನೇ ಆದ್ರು ನಮ್ಮ ನಮ್ಮ ಮಾನ ನಾವೇ ಕಳ್ಕಬಾರ್ದು. ಈವೊತ್ತು ಹೆಸರನ್ನ ಪಾಯ್ಸು ಚೊಕ್ಕ ಭೋಜ್ನ ವ್ರತ ಕೆಡಸಿರಬೌದು. ನಾಳಾ ಮರ್‌ಪೂಜಾ ಮಾಡ್ತಿನಿ. ಕಜ್ಜಾಯ ತುಪ್ಪ. ಆ ಮುದ್ಕನ್ನ ಮೂರ್ ವಿಷದ ಕಜ್ಜಾಯ ಇಕ್ಕಿಸಿ ಸಾಯ್ಸು ಬಿಡಾಮು ಯಾರು ಸಂಕೋಚ ಪಡಬೇಡಿ' ಅಂದಾ. ಮಹಾನುಭಾವ ಕೆಬ್ಬಕಟ್ಟಿಗ ಬಂದಿದ್ದಾರ ಕೆಬ್ಬಕಟ್ಟವರ್ಗ ಯಾವಾಗ ಕಂಡಾಯಗಳ್ಗ ಹೂ ಹೊಂಬಾಳೆ ಮಾಡಿದರು. ಬೆಳ್ಳಿಮೂಡಿ ಬೆಳಕರಿದು ಬಂತು ಭಟ್ಟರ ಕೈಲಿ ಸಾರ್ಸ್ದ 'ನೆನ್ನ ದಿವ್ಸ ಹೆಸರನ್ನ ಪಾಯ್ಸು ಚೊಕ್ಕ ಭೋಜ್ನ. ಇವೊತ್ತು ಕಜ್ಜಾಯ ತುಪ್ಪ, ದಾಸಯ್ಯ-ಜೋಗಯ್ಯ, ಹರಕ್ರು-ತಿರುಕ್ರು ಗುಡ್ಡ ಗುರುವಯ್ಯ ಯಾರಿದ್ರು ಭಿನ್ನಭೇದವಿಲ್ಲದೆ ಬಿನ್ನಕ್ಕ ಬರಬಹುದು' ಅಂದ್ರು.

ಧರೆಗೆ ದೊಡ್ಡವರು ಬಂದು ಒಂದು ಕಜ್ಜಾಯವನ್ನು ಊಟ ಮಾಡ್ದರ ಎರಡು ಕಜ್ಜಾಯ ತೆಗ್ದು ಮುತ್ತಿನ ಜೋಳ್ಗ ಹಾಕವ್ರೆ. 'ಅವ್ನ ಮನಕಜ್ಜಾಯ ಅವ್ನಮಕ್ಕಳಿಗೆ ಕೊಡ್ತಿನಿ' ಅಂತೇಳಿ ಮಹಾಪ್ರಭು ಮನೆಯನ್ನು ಬಿಟ್ಟು ಹೋಗುವಾಗ ಮಾರಾಜ್ನಗೆ ಹೇಳಿದ್ರು 'ಮಾರಾಜ ಹೋಗ್ಬಿಟ್ಟಾ ಬರ್ತಾ'. 'ಹೋಗ್ಬುಟ್ಟು ಬನ್ನಿ ಮಾಪ್ರಭು' ಎಂದ. ಮನೆಯನ್ನು ಬಿಡುವಾಗ 'ಮೂರು ವಾಕ್ಯ ಹೇಳ್ತಿನಿ ಕೇಳು ಮಾರಾಜ ನೀಡಿದವರ್ಗ ನಿಜ ಸಾಕ್ಷಿ. ಮಾಡಿದವರ್ಗ ಮನಸಾಕ್ಷಿ. ತೋಡಿದ ಬಾವ್ಗ ಜಲವೇ ಸಾಕ್ಷಿ'.

ನೀನು ಮಾಡ್ ಮಾಡ್ದೆಲ್ಲಾ
ನಿನ್ನ ಮಡಿಲಲ್ಲೇ ಕಟ್ಟಿವಿನಿ ಮಗ್ನೇ ||ಸಿದ್ದಯ್ಯ ಸ್ವಾಮಿ ಬನ್ನಿ||

ಓದುವ ಹಲಗೆಗಳ ಕೈಯಲ್ಲಿಡಿದು, ಕಲ್ಲೆಂಬ ಹುಲ್ಲೆಂಬ ದೇವರುಗಳಿಗೆ ಬಗ್ಗಿ ಬಗ್ಗಿ ಶರಣು ಮಾಡಿಕೊಂಡು ಅತ್ತಿಂದ ಬರುತ್ತಿದ್ದಾರೆ. ಬರುವಂತ ಮಕ್ಕಳ ಕಂಡ್ರಲ್ಲ ಗುರುವ. 'ಅಯ್ಯೋಯ್ಯೋ ನನ್ನ ಕಂದ, ಬನ್ನಿರೆಂದು. ಅನ್ನಯಿಕ್ಕಿದ ನಿಮ್ಮನೆ ಹಾಲು ಸಾಗ್ರವಾಗಲೀ, ಹೆಚ್ಚೊಕ್ಕಲಾಗಿ ಬಾಳುವಂತಾಗಲೆಂದು ಹಿರಿಯವನು ಹಿರಾಪ್ಪಾಜಿ ನೀನು ಬಾರಪ್ಪ ಕಿರಿಯವನು ಚೆನ್ನಾಪ್ಪಾಜಿ ನೀನು ಬಾರೆಂದು' ಮುತ್ತಿನ ಜೋಳಿಗೆಗೆ ಕೈಯಿಟ್ಟು ಇಬ್ಬರಿಗೂ ಒಂದೊಂದು ಕಜ್ಜಾಯ ಕೊಡುತಾರೆ.

ಮಂಟೇಲಿಂಗಯ್ಯನ ಕೊಟ್ಟ
ಕಜ್ಜಾಯಗಳನೆ ತಿಂದರಲ್ಲ
ಪಟ್ಟನೇ ಪ್ರಾಣ ಬಿಟ್ಟಾರಲ್ಲ ||ಸಿದ್ದಯ್ಯ ಸ್ವಾಮಿ ಬನ್ನಿ||

ತೇಗಿನಲಗೆ ತಂದು ಕುರ್ಜು ಕಟ್ಟುತ್ತಾರೆ, ಬಿದರಚ್ಚೆ ಹೊಡೆದು ಕುರ್ಜು ಕಟ್ಟುತ್ತಾರೆ, ಜಾತಿಗೊಂದು ಬಗೆಯ ಹೂಗಳ ತಂದು ಹೂವಿನ ಕುಚ್ಚುಗಳನೆ ಕಟ್ಟಿದರಂತೆ, ತೆಂಗಿನ ತಾರುಗಳನೆ ಕಟ್ಟಿದರಂತೆ, ನಾಕು ಮೂಲೆಗೂ ನಾಕು ಬಾಳೆಕಂಬ, ನಾಕು ಮೂಲೆಗೂ ನಾಕು ಕಬ್ಬಿನಜಲ್ಲೆ ಕಟ್ಟಿ ಕುರ್ಜ ಸುಂಗಾರ ಮಾಡಿ ಸಂದಿರುವ ಮಕ್ಕಳಿಗೆ ನೀರೂದು ತೊಳೆದು ಬಾಚಿಬೈತಲೆ ತಗದು, ಸುಂಗಾರ ಮಾಡಿ, ನವರತ್ನದ ಕಂಠೀಹಾರವ ಕೊರಳಿಗಾಕಿ,

ಕೀಳುಕಂಕಣ ಭುಜಕೀರ್ತಿಗಳನೆ ಇಕ್ಕಿ, ಕಾಲಿನ ಗೆಜ್ಜೆಯಮ್ಯಾಲೆ ಚಿನ್ನದ್ವಾರ ಹಾಕಿ, ಕುರ್ಚಿಣ ಮ್ಯಾಲೆ ಮಕ್ಕಳ ಕುಂದ್ರಿಸಿದರೆ.

ತಂದೆತಾಯಿಗಳು ನೋಡಲಾರದೆ
ಬಾಳ ಶೋಕ ಮಾಡುತಾರ
ಗಾಳುಗೋಳನೆ ಅಳುತಾರ
ಕೊಂಬು ಕಹಳೆಗಳ ಕರೆಸಿ ಕೈತಾಲ ಕರೆಸಿ
ಸುಡುಗಾಡು ಮಾಳಕಾದರು ಬರುತಾರೆ ॥ಸಿದ್ದಯ್ಯ ಸ್ವಾಮಿ ಬನ್ನಿ॥

ಧರೆಗೆ ದೊಡ್ಡಯ್ಯನವರು ಕರಿಯ ಪಾಗನ್ನೆ ತಲೆಗೆ ಸುತ್ಕಂಡು ಕೈಯಲ್ಲಿ ಕಬ್ಬಿಣದ ಬಳಿಸರ ಹಾಕ್ಕೊಂಡು, 'ದುಗ್ಗಾಣಿ ಕೊಡಿರಮ್ಮ' ಎಂದ್ಕೊತಾ ಬಂದರು. ಸತ್ತು ಮಲಗಿರುವ ಮಕ್ಕಳೆಣಗಳನೆ ಮೂರು ಬಳಸು ಬಂದು ದುರದುರನೆ ನೋಡಿ 'ಇಲ್ಲಿ ಸತ್ತು ಮಲಗಿರುವ ಮಕ್ಕಳ ಈಗಲೇ ಪಡೆದು ಅವರ ಮೊದಲಿನಂತೆಯೇ ಮಾಡಿದರೆ ನನಗೇನು ಕೊಟ್ಟಿರಯ್ಯ'. 'ದಂಡು ದಾಳಿ ಅರ್ಧ ರಾಜ್ಯವನೆ ಕೊಡ್ತಿವಿ, ಹೊನ್ನು ಬಂಗಾರ ಅರ್ಧ ಭಾಗ ಕೊಡ್ತಿವಿ' ಮುತ್ತುರತ್ನಗಳನೆ ತುಂಬಿಕೊಡ್ತಿವೆಂದರೆ ನೀವು ದಂಡುದಾಳಿ ಕೊಟ್ಟರೆ ಪಡೆನಾರಿ, ಅರ್ಧ ಮೈಸೂರು ಪಟ್ಣ ಕೊಟ್ಟರೂ ಪಡೆನಾರಿ, ಹೊನ್ನು ಬಂಗಾರಗಳ ಕೊಟ್ಟರೂ ಪಡೆನಾರಿ ನಿಮ್ಮ ಸತ್ತಿರುವ ಮಕ್ಕಳ ದಾನ ಕೊಟ್ಟರೆ ನಾನು ಈಗಿಂದೀಗಲೇ ಮಕ್ಕಳ ಪಡೆತೀನಿ

ಅವರೆಲ್ಲಾದರೂ ಸುಖವಾಗಿ ಬದುಕಿಕೊಳ್ಳಲಿ
ನೀವು ಕರಿದಿರಿಸಿನವನ ಮಾತಿಗೆ ಒಪ್ಪಿರಯ್ಯ ॥ಸಿದ್ದಯ್ಯ ಸ್ವಾಮಿ ಬನ್ನಿ॥

'ಬಾಯಿಮಾತಲಿ ಹೇಳಿದರೆ ಒಪ್ಪವುದಲ್ಲಾ, ಇವ್ರು ಧರೆಗೆ ದೊಡ್ಡವರ ಮಕ್ಕಳೆಂದು ಕೈಪತ್ತು ಬರೆದು, ಕರಾರು ಕಾಗದ ಬರೆದು, ತಾಮ್ರದ ಚಪ್ಪೋಡಿನಲ್ಲಿ ಬರಕೊಟ್ಟರೇ, ನಾನು ಮಕ್ಕಳ ಪಡಿತೀನೆಂದು' ಮಾನ್ಯರಿಗೇಳಿ, ಹಸುಳೆಯ ಸುತ್ತ ತೆರೆಯ ಬಿಡಿಸಿಬುಟ್ಟು ಮಾನ್ಯರ ದೂರಕ್ಕೆ ಕಳಿಸುಬುಟ್ಟು, ಗುರುವು ಒಳಗೆ ದುರತಕ್ಕೆ ಕುಳಿತುಕೊಂಡು

ದುರತ ಮಾಡಿ ಕಪ್ಪು ಧೂಳ್ತ
ತಕ್ಕಂಡು ಮಕ್ಕಳಮ್ಯಾಲೆ
ಉಫ್ ಎಂದು ಉರುಬುತಾರೆ
ಆಗಲೀಗ ದಡಬಡನೆ ಎದ್ರಲ್ಲ ಮಕ್ಕಳು ॥ಸಿದ್ದಯ್ಯ ಸ್ವಾಮಿ ಬನ್ನಿ॥

ಸಖಿರಾಯಪಟ್ಣದ ಮಾರಾಜ ಹೇಳ್ದ 'ನಾವ್ ನೋಡ್ತಾ, ಲಕ್ಷಿಕರು. ನೀವ್ ನೋಡದ್ರು ಅರ್ರುಜೋಳ್ಗ ಮುರ್ಕಬೆತ್ತ ಹಾಕ್ಕಂಡು ದೇಸ ದೇಸದ ಮೇಲಾ, ನೆರಮನ ಬಾಕ್ಲೀ ಭಿಕ್ಷಾ ಮಾಡ್ಕೊಂಡು ತಿರಕ ತಿನ್ನವ್ರು. ಈ ಲಕ್ಷಿಕರ ಮಕ್ಕಳ ತಕ್ಕಂಡು ಏನ ಮಾಡ್‌ದರಿ ಮಾಪ್ರಭು'. ಧರೆಗೆ ದೊಡ್ಡವರು ಹೇಳಿದ್ರು 'ಮಾರಾಜಾ ನಾನು ಭಿಕ್ಷುಕನಾದ್ರು ನಿನ್ನ ಮಕ್ಕಳ ಖಂಡಿತವಾಗಿ ನಾನ್ ಕಾಡ್ ಮಾಡಾದಿಲ್ಲಾ. ಓಲಾಗರಿತಕ್ಕೆ, ನವಿಲಗರಿ ಬೆಂಡತಕ್ಕೆ,

ತಾಮ್ರ ತಗಡಿನೊಳಗ ಚಪ್ಪೋಡು ಬರ್ಲಿಬಿಡು. ಹಿರಿಮಗ್ನಾದ ಹಿರಾಪ್ಪಾಜಿಗ ಹಿರ್‌ಪಟ್ಟ ಕಟ್ತೀನಿ ಬೊಪ್ಪೂಪುರದ ಬುದ್ಧಿಯವರು ಅಂತಾ ನಾಮಾಂಕಿತ ಮಾಡ್ತೀನಿ. ಬೊಪ್ಪೂಪುರದ ತಾಲೂಕಲ್ಲಿ ಬರೋ ವರಮಾನು ತೆಂಕ್ಲ ರಾಜ್ಯದಲ್ಲಿ ಉಳವಿ ಮಸಿಲ ಒಳ್ಗ ಕಿರಿಮಗ್ನಿಗ ಮಠಾಂತ ಮಾಡ್ತೀನಿ. ಅಲ್ಲಿ ಬರ ವರಮಾನ ಹಿರೀಮಗ್ನಗಾಗ್ಲಿ, ಕಿರಿಮಗ್ನಾದ ಚೆನ್ನಪ್ಪಾಜಿ ಮಳವಳ್ಳಿ ಸ್ವಾಮಿಗಳು ಅಂತಾ ನಾಮಾಂಕಿತ ಮಾಡ್ತೀನಿ. ಮಳವಳ್ಳಿ ತಾಲೂಕಲ್ಲಿ ಬರೋ ವರಮಾನ, ಹೊನ್ನಾಯಕ್ನಳ್ಳಿ ವರಮಾನ ಕಿರಿಮಗ್ನಗಾಗ್ಲಿ, ಬಕೀರ ಪಟ್ಟಿ' ಅಂದ್ರು, ಕಪ್ಪಡಿಯಿಂದ ಬರೋ ವರಮಾನ ಹಿರಿಯಮ್ನಗೊಂದ್ ವರ್ಷ, ಕಿರಿಯಮ್ನಗೊಂದ್ ವರ್ಷ. ನಾಳಾ ನನಕಂದ, ತೆಳ್ನೂರು, ಕೊತ್ನೂರು, ಬಾಣೂರು, ವಾಳ್‌ಗುಬ್ಬ, ಸುಂದ್ರಳ್ಳಿ ಗ್ರಾಮದ ಪಕ್ಕ ಚಿಕ್ಕಳ್ಳಿ ಗ್ರಾಮ ನಾಳಾ ಚಿಕ್ಕಲನ್ನೂರು. ಅಲ್ಲಿ ಬರೋ ವರಮಾನ ಹಿರಿಮಗ ಹಿರಾಪ್ಪಾಜಿ ಬೊಪ್ಪೂಪುರದ ಬುದ್ಧಿಯವರ್ಗೆ ಹೊರ್ತು ಮಳವಳ್ಳಿ ಸ್ವಾಮಿಗಳ್ಗೆ ಹಕ್ಕಿಲ್ಲಾ. ಅಂತೇಳಿ ತಾಮ್ರದ ತಗಡು ಚಪ್ಪೋಡು ಬರೆಸಿದ್ದಾರೆ.

೫

# ದೊಡ್ಡಮ್ಮತಾಯಿ ಪಡೆದ ಸಾಲು

ಸಖರಾಯಪಟ್ನ ಬಿಟ್ಟರಂತೆ
ಕಾಗಿನೆಲೆಗೆ ದಯವಾದರಂತೆ ॥ಸಿದ್ದಯ್ಯ ಸ್ವಾಮಿ ಬನ್ನಿ ಕಾಗಿನೆಲೆಯಲ್ಲಿ
ಲಿಂಗಯ್ಯ ನೀವೇ ಬನ್ನಿ॥

ಈ ರಾಚಪ್ಪಯ್ಯನವರಿಗೆ ಕಲ್ಯಾಣ ಮಾಡಬೇಕು ಅಂದರಂತೆ ಎಲ್ಲಾರ ಒಂದು ಹೆಣ್ಣು ದೇವರ ಪಡೆಯಬೇಕು. ಕಾಗಿನೆಲೆಯಲ್ಲಿ ಬಸವಲಿಂಗಯ್ಯನವರು ಕ್ಷತ್ರಿಯಕುಲದ ಅರಸುನೋರಂತೆ, ಅವರ ಮಡದಿ ಕಲ್ಯಾಣಮ್ಮನವರು ತುಂಬ ಭಾಗ್ಯವಂತರು. ಅವರಿಗೆ ಗಂಡುಮಕ್ಕಳಿಲ್ಲ. ಒಂದು ಹೆಣ್ಣು ಮಗ ಇರುವುದಂತೆ ಆವಾಗ ನಮ್ಮ ಸ್ವಾಮಿಯವರು

ಬಾರಿ ಡಂಗೂರವನ್ನು
ಕೂಚುಮಾಡಿಕೊಂಡು
ಬಸವಲಿಂಗಯ್ಯನವರ
ಅರಮನೆಗೆ ಕ್ವಾರಣ್ಯಕೆ
ದಯಮಾಡುತರೆ ॥ಸಿದ್ದಯ್ಯ ಸ್ವಾಮಿ ಬನ್ನಿ॥

ಸ್ವಾಮಿಯ ಮೊಖವನ್ನು ನೋಡಿದರು ಕಲ್ಯಾಣಮ್ಮ. ಮುತ್ತುರತ್ನದ ದಾನವನ್ನು ಬೇಗದಲ್ಲಿ ತುಂಬಿಕಂಡು ಸ್ವಾಮಿಗೆ ಕ್ವಾರಣ್ಯ ತಂದರು. ಮುತ್ತುರತ್ನದ ದಾನಕ್ಕೆ ಬರನಿಲ್ಲ ಕಲ್ಯಾಣಮ್ಮ. ಮತ್ತೇನ ಒಪ್ಪಿ ಬಂದ್ರಿ ಹೆಚ್ಚಿನ ಜಂಗುಮಯ್ಯ

ನಿಮ್ಮ ಮನೆ ಒಳಗೆ
ಒಂದು ಹೆಣ್ಣುಮಗ ಅದಲ್ಲ
ಆ ಹೆಣ್ಣು ಮಗೀಗೋಸ್ಕರ ಬಂದಿದ್ದೇನೆ
ನೀವು ಸತಿಪತಿಯರು ಒಪ್ಪಿ
ನಾಕ್‌ಪಾದ್ದ ಜೋಳ್ಗಿ ದಾನ ಕೊಡಿರಮ್ಮ ॥ಸಿದ್ದಯ್ಯ ಸ್ವಾಮಿ ಬನ್ನಿ॥

ಸ್ವಾಮಿ ಆಡಿದ ಮಾತ ಕೇಳಿದರು ಕಲ್ಯಾಣಮ್ಮ. ಅವರ ಪತಿಯ ದಂಡ್ಕಾ ಹೋಗಿ ಅರಕೆಯ ಮಾಡತಾರೆ, 'ಸ್ವಾಮಿ ಮುತ್ತುರತ್ನ ಒಲ್ಲರಂತೆ ನಮ್ಮ ಸತಿಪತಿರಿಬ್ಬರೂವೆ ಒಂದೇ ದುಡದಲ್ಲಿ ನಮ್ಮ ಮಗಳ ದಾನವನ್ನು ಕೊಡಬೇಕಂತೆ' ಅಂತ ಹೇಳಿದರು.

ಬಸವಲಿಂಗಯ್ಯನವರಿಗೆ ಬಹಳ ಕ್ಯಾಪ ಬಂದಿತಂತೆ 'ಭಿಕ್ಷೆಕೆ ಬಂದವನ ಸೊಕ್ಕಿನ ಮಾತ ನೋಡಿದೇನೆ, ಒಂದೇ ಹೆಣ್ಣುಮಗ ಗಂಡು ಮಗಿನಂಗೆ ಸಾಕ್ಕೊಂಡಿದ್ದಿನಿ ಆ ಮೊಗ ಕೇಳಾಕೆ ಬಂದವನಲ್ಲ, ಪರದೇಶಿ ಅವನ ಕತ್ತ ಮೇಲೆ ಗುದ್ದಿ ಆಚೆಗೆ ನೂಕಿಬಿಡೆ'.

ಬಸವಲಿಂಗಯ್ಯನವರ ಮಾತ ಕೇಳಿಕಂಡು ನಮ್ಮ ಗುರುವು ನಾಕ್‌ಪಾದ ಜೋಳ್ಗಿ

ಕೈಹಾಕಿ ಕಪ್ಪು ಧೂಳ್ತ ತಗದು
ಮಗೀನ ಮೇಲೆ ಎಸೆದರಂತೆ
ಅರಮನೆ ಬಿಟ್ಟುಬಿಟ್ಟು
ಶರಣ ಮಹಾತ್ಮರ ದಂಡೇಲಿ
ಮೋಹರ್ತ ಮಾಡಿದರಂತೆ
ಅಲ್ಲಿ ಭಂಗಿ ಫಲಾರವ
ಮಾಡುತಾರೆ ಪ್ರಭುದೇವ ||ಸಿದ್ದಯ್ಯ ಸ್ವಾಮಿ ಬನ್ನಿ||

ಅತ್ತ ಮಗಿಗೆ ಯಮದ ಸಳಿ, ಯಮದ ಜರಾ ಬಂದು ಬಿಡ್ತು. ಹೆಣ್ಣು ಮಗ ಚಣ ಮಾತ್ರದಲ್ಲಿ ಪ್ರಾಣವನ್ನು ಬಿಟ್ಟಿತಂತೆ. ಸತ್ತ ಮಗನ ಹಾಕ್ಕೊಂಡು ದುಃಖವನ್ನು ಮಾಡುತಾರೆ. ಯಾವಾನೋ ಪರದೇಶಿ ಬಂದಿದ್ದು ನಮ್ಮ ಮಗ ಕೇಳಿಬಿಟ್ಟು ಹೋದ, ಪರದೇಶಿಗಾದರೂ ಮಗ ಕೊಡಲಿಲ್ಲ ಅನ್ಯಾಯವಾಗಿ ಮಗ ಸತ್ತೋಗಿಬಿಡ್ತಲ್ಲ. ಎಂದು ಬಾಳಾ ಶೋಕ ಮಾಡ್ತ

ಹೆಣವನ್ನು ತೊಳೆಸಿ
ಸುಂಗಾರ ಮಾಡಿ
ಪಲ್ಲಕ್ಕಿ ಮ್ಯಾಲೆ
ಹೆಣ ಮಲಿಗಿಸಿಕೊಂಡು
ಮಸಾಣಕ್ಕೆ ತರುತಾರೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಮಸಾಣಕ್ಕೆ ಬಂದರಂತೆ. ಅಲ್ಲಿ ಹಳ್ಳವನ್ನು ತಗಿಸಿ ಮಗುವನ್ನು ಒಪ್ಪ ಮಾಡಿಸಿದರಂತೆ. ಮಗೀಗೆ ತಾಯಿ ತಂದೆ ಪೂಜೆ ಕ್ರಿಯೆಗಳನ್ನು ಮಾಡಿಬಿಟ್ಟು ಹೋಗಿದ್ದಂತ ಮಾನವರೆಲ್ಲ ಹಿಂತಿರುಗಿ ಅರಮನೆಗೆ ದಯಮಾಡುತಾರೆ. ಹೋಗಿ ಸ್ನಾನ ಮಾಡಿಕೊಂಡು ಇಬ್ಬರೂವ ಮಂಚದ ಮ್ಯಾಲೆ ಕುಂತ್ಕೊಂಡು ದಂಪತಿಗಳು ದುಃಖ ಮಾಡ್ತಾರೆ.

ನಮ್ಮ ಸ್ವಾಮಿಯವರು
ಮಸಣಕ್ಕೆ ದಯಮಾಡುತವರೆ
ನಾಕು ಪಾದ ಜೋಳಿಗೆಯಿಂದ
ಕಪ್ಪು ಧೂಳ್ತ ತಗದರಂತೆ
ಗೋರಿ ಮ್ಯಾಲೆ ಎಸೆದರಂತೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಏಳೇಳು ಮಗಳೆ ನಿನಗೆ
ಜಯ ಜಯ ಅಂದರಂತೆ
ಗೋರಿಂದ ಮಗುವು
ಒಡೆದು ಮೂಡಿತಂತೆ
ನಮ್ಮ ಸ್ವಾಮಿ ಪಾದಕೆ
ಬಂದು ನಮಸ್ಕಾರ ಮಾಡುತಾದೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಮಗ ಕರ್‍ಕಂಡು ಸ್ವಾಮಿ ಹರಿವ ಜಲಧಿಗೆ ದಯಮಾಡುತಾರೆ. ಆ ಮಗುವಿಗೆ ಮೀಯಾನ ಮಾಡಿಸಿದರು, ಕಾವಿ ದೇವಾಂಗ ಉಡಿಸಿದರು, ಇಬತ್ತಿ ಮಟ್ಟಿಕಪ್ಪ ಧರಿಸಿದರು. ಬಲಚಾರಿ ಹೆಗಲಮ್ಯಾಲೆ ನಾಗಬೆತ್ತ ಹೊರಿಸಿದರು. ಸತ್ತ ಮಗವ ಕದ್ದು ಕರ್‍ಕಂಡ್ಹೋಗಬಾರದು. ಇವರ ತಾಯಿ ತಂದೆ ಮನ ಮೆಚ್ಚಿಸಿ ಕರಕಂಡೋಗಬೇಕು ಅನ್ನೋದಾಗಿ

ಹೆಣ್ಣು ಮಗವ
ಕೈಲಿ ಹಿಡಕಂಡು
ಆ ಬಸವಲಿಂಗಯ್ಯನವರ
ಅರಮನೆಗೆ ದಯಮಾಡುತವರೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಅದೇ ತಾನೆ ಹೆಣ ಒಪ್ಪ ಮಾಡಿ ಹೋಗಿ ಮಂಚದ ಮ್ಯಾಲೆ ದುಃಖ ಮಾಡ್ತ ಕೂತಿದ್ರು. ಅದೇ ಯಾಳ್ಯಕ್ಕೆ ನಮ್ಮ ಸ್ವಾಮಿ ಡಂಗೂರ ಕೂಚು ಮಾಡಿಕೊಂಡು. ಬಸವಲಿಂಗಯ್ಯನವರ ಅರಮನೆಗೆ ದಯ ಮಾಡುತವರೆ. ಬಸವಲಿಂಗಯ್ಯ ನಮ್ಮಸ್ವಾಮಿ ನೋಡಿ ಬಹಳ ಸಿಟ್ಟಾಗಿ ರೇಗಿದರು. 'ಹಟ್ಟೆಬಿಟ್ಟು ಆಚೆಗ್ಹೋಗು ಹುಚ್ಚು ಕಾಡ್ ಜಂಗಮನೆ' ಎಂದರು. 'ಏನಯ್ಯ ಸಿಟ್ಟು ಮಾಡಬೇಡಿ ಯಾರದೋ ಹೆಣ್ಣು ಮಗ ನೋಡಿರಯ್ಯ' ಅಂದರಂತೆ.

ಬಸವಲಿಂಗಯ್ಯನವರೂ
ಕಲ್ಯಾಣಮ್ಮನವರು
ಮಂಚವನ್ನಿಳಿದು
ಗುಡುಗುಡನೆ ಓಡಿಬಂದು
ಈ ಮಗ ನಮ್ಮದು ಅಂದರಂತೆ ||ಸಿದ್ದಯ್ಯ ಸ್ವಾಮಿ ಬನ್ನಿ||

'ನಿಮ್ಮ ಮಗಳಾದರೆ ನೀವು ಕರಕೊಂಡ್ಹೋಗಿರಪ್ಪ' ಅಂದ್ರಂತೆ ಸ್ವಾಮಿ. ಸತಿಪತಿ ಯರಿಬ್ಬರೂವೆ ಮಗಳ ಹಿಡಿದು ಎಳೆದರಂತೆ 'ಬಾರಮ್ಮ ಮಗಳೇ' ಅನ್ನೋದಾಗಿ, 'ಯಾವಾಗ ನನ್ನ ವಸ್ತು ಹೋಯ್ತೋ ಅಲ್ಲಿಗೆ ಒಂದು ಯುಗಾಂತರ ತುಂಬಿತು, ಅವರ ಪಾದನೇ ಕಂಡು ಬದಕತೀನಿ ಹೋಗಿ ಅಂದುಬುಡ್ತು' ಮಗು. ತಾಯಿ ತಂದೇರು ಬಹಳ ಚಿಂತೆ ಮಾಡುತಾರೆ. ಬಸವಲಿಂಗಯ್ಯನವರೇ ಕಲ್ಯಾಣಮ್ಮನವರೇ ದುಃಖ ಮಾಡಬೇಡಿ. ಈ

ಹೆಣ್ಣುಮಗಳ ನಾವು ದೇವರ ಮಾಡಿ ನಿಲ್ಲಿಸ್ತಿವಿ. ಇದಕ್ಕೆ ಕಟ್ಟಿದಂತ ಕಾಣಿಕೆ, ಬೆಳ್ಳಿಂತ ಜನ್ನಿಗೆ, ಹೆಣ್ಣುಮಕ್ಕಳ ಹಣ, ಈ ಹಣನ್ನೆಲ್ಲಾ ನೀವೇ ಉಪಯೋಗಿಸಿಕೊಂಡು ನಮ್ಮ ಮಠದ ಕಡೇಬಾಕಲಲ್ಲಿ ಇದ್ಕೊಳ್ಳಿ ಬನ್ನಿ.

ಹೆಣ್ಣು ಮಗೀನ ಪೂಜೆ
ನಿಮಗೇ ನೇಮಿಸ್ತೀವಿ
ಅವರ ತಾಯಿ ತಂದೆ ಕರಕಂಡ್ರು
ಹೆಣ್ಣುಮಗಾನು ಕರಕಂಡ್ರು
ಕಾಗಿನೆಲೆ ಊರಂಕಕ್ಕೆ
ದಯಮಾಡುತಾರೆ ||ಸಿದ್ದಯ್ಯ ಸ್ವಾಮಿ ಬನ್ನಿ||

**ಅಡಿಟಿಪ್ಪಣಿ**

ನೀಲಗಾರ ಗುರು ಪರಂಪರೆಯಲ್ಲಿ ಎರಡು ಪಂಗಡಗಳಿವೆ. ಒಂದು ಮಳವಳ್ಳಿ ರಾಚಯ್ಯನವರ ಗುರುಪರಂಪರೆ ಇನ್ನೊಂದು ಕಾರಾಪುರದ ಪುಟ್ಟಮಾದಯ್ಯನವರ ಗುರುಪರಂಪರೆ. ಮಳವಳ್ಳಿ ರಾಚಯ್ಯನವರ ಗುರುಪರಂಪರೆಯವರು ದೊಡ್ಡಮ್ಮತಾಯಿಯನ್ನು ಕಾಗಿನೆಲೆಯಲ್ಲಿ ಪಡೆದರೆ, ಕಾರಾಪುರದ ಪುಟ್ಟಮಾದಯ್ಯನವರ ಗುರುಪರಂಪರೆಯವರು ದೊಡ್ಡಮ್ಮತಾಯಿಯನ್ನು ಮೈಸೂರಿನಲ್ಲಿ ಪಡೆಯುತ್ತಾರೆ. ಆದರೆ ಚಾರಿತ್ರಿಕವಾಗಿ ದೊಡ್ಡಮ್ಮತಾಯಿ ಕಾಗಿನೆಲೆಯ ಸರಶೆಟ್ಟಿ ಮನೆತನದವಳು ಆದ್ದರಿಂದ ಈ ಪಠ್ಯದಲ್ಲಿ ಮಳವಳ್ಳಿ ರಾಚಯ್ಯನವರ ಕತೆಯನ್ನು ತೆಗೆದುಕೊಳ್ಳಲಾಗಿದೆ. ಎರಡು ಪರಂಪರೆಗಳಿವೆ ಎಂದು ಗುರುತಿಸುವುದಕ್ಕೆ ಇದೊಂದೇ ವ್ಯತ್ಯಾಸ ಮಾತ್ರ ಸಿಗುತ್ತದೆ. ಉಳಿದ ಎಲ್ಲ ಭಾಗದ ಕತೆ ಒಂದೇ ರೀತಿ ಇದೆ.

೬

# ಬೊಪ್ಪೇಗೌಡನಪುರದ ಸಾಲು

ಕಾಗಿನೆಲೆಯ ಬಿಟ್ಟರಂತೆ
ಎಲಾಕುಂದೂರು
ಬೆಟ್ಟಕೆ ಬಂದರಂತಾ ॥ಸಿದ್ದಯ್ಯ ಸ್ವಾಮಿ ಬನ್ನಿ ಬೊಪ್ಪೇಗೌಡ
ಲಿಂಗಯ್ಯ ನೀವೇ ಬನ್ನಿ॥

ಮಹಾನುಭಾವ ಧರೆಗೆದೊಡ್ಡವರು, ಕಿಡುಗಣ್ಣರಾಚಪ್ಪಾಜಿ, ಕಿರಿಯಚೆನ್ನಾಜಮ್ಮ, ದುಡವುಳ್ಳ ದೊಡ್ಡಮ್ಮನನ್ನು ಕೂರಿಸಿಕೊಂಡು 'ಈ ಭೂಮಿ ಪಡೆದೆ, ಭೂಲೋಕ ಪಡೆದೆ, ಸೂರ್ಯ ಚಂದ್ರಾದಿಗಳನ್ನು ಪಡೆದೆ, ತ್ರಿಮೂರ್ತಿಗಳನ್ನು ಪಡೆದೆ, ಕಲ್ಯಾಣವನ್ನು ಬರಿದು ಮಾಡಿದೆನ್ನಲ್ಲಾ ಈ ನಾಲ್ಕು ರಾಜ್ಯಕ್ಕು ಒಪ್ಪಿತವಾದ ಜಾಗ ಪಡಿಬೇಕು' ಅಂದ್ರಂತಾ. ದೊಡ್ಡಮ್ಮ ತಾಯಿ ಹೇಳ್ದ 'ಊರಲ್ಲ-ಕೇರಿಲ್ಲ, ತಳವಲ್ಲ-ಕುಲವಲ್ಲ, ನೆಪ್ಪಿಲ್ಲ-ಗುರ್ತಿಲ್ಲ ದೇಶ್ದ ಮೇಲೆ ಮುರ್ಕಬೆತ್ತ, ಹರ್ಕಜೋಳ್ಗ, ಸಿಕ್ಕಾಕಂಡು ಭಿಕ್ಷಾ ಮಾಡೋ ತಿರ್ಕ ತಿನ್ನೊ ಜನ್ಕ, ಜಾಗ ಯಾರು ಕೊಟ್ಟಾರು ಅಪ್ಪಾಜಿ' ಅಂದ್ರು. 'ದೊಡ್ಡಮ್ಮ, ಕಲ್ಯಾಣಪಟ್ನದಲ್ಲಿ ಲಿಂಗಾಧಾರಣೆ ಮಾಡಿರುವಂತ ಭಕ್ತಾಧಿಗಳಲ್ಲಿ, ಇಬ್ಬರು ಇದ್ದಾರ, ಜಗತ್ತದಲ್ಲಿ ಜಾಗ ಕೊಡೋ ಭಕ್ತರು' 'ಅಂತವರ್ಯಾರು ಪ್ರಭು' ಅಂದ್ರು.

ಕಣ್ಣಿಗೆ ದಂಡೆವ್ವ
ಕಾಲಿಗ ಬಲ್ ದೂರ
ಕಣ್ಣೆತ್ತಿ ನೋಡವ್ವ
ದಕ್ಷಿಣ ಭಾಗದೊಳಗ
ನೀತಿಲಿ ಲಿಂಗವಂತ
ಜಾತಿಲಿ ಕುರುಬಗೌಡ
ಬೊಪ್ಪೇಗೌಡ ಘನಶರಣ
ಒಕ್ಕಲೆಬ್ಬಿ ಬಾಳತಾನ
ಕುರುಬ ಗೌಡನ ಬಾಳಾಟನ
ಹೇಳುತೀನಿ ಕೇಳು ಮಗಳ ॥ಸಿದ್ಧಯ್ಯ ಸ್ವಾಮಿ ಬನ್ನಿ॥

ಮುಂದೇಳಟ್ಟಿ ಕಂದಾ
ಹಿಂದೇಳಟ್ಟಿ ಮಗಳೇ
ಏಳುಂಡಿ ಕುರಿಯವ್ವ
ಏಳುಂಡಿ ಎಮ್ಮೆವ್ವ
ಪುಣ್ಯವಂತ ಗೌಡ
ಒಕ್ಕಲೆತ್ತಿ ಪಡೆದವನೆ
ಕುರಿಯಗೌಡ ಕೊಟ್ಗ
ಉರಿಗದ್ಗ ಆಗಬೇಕು
ಮಾಚದೇವರ ಕತ್ತೆಕೊಟ್ಗ
ಚಂದ್ರಶಾಲ ಆಗ್ಬೇಕು
ಉಬ್ಬ ಓಲ ಒಳಗ
ಊಳಿಗ ಅರಮನ ಆಗಬೇಕು
ತೊಟ್ಟಿ ಒಳಗ ದೊಡ್ಡಮ್ಮ
ಮಜ್ಜನ ಬಾವಿ ಒಂದ್ಯಾಬೇಕು ||ಸಿದ್ಧಯ್ಯ ಸ್ವಾಮಿ ಬನ್ನಿ||

ಕಪ್ಪಡಿ ಕೈಲಾಸ
ಚಿಕ್ಕಲ್ಲೂರು ಗುರು ಮಠ
ಹಾದಿಗೆ ಹಲವಾರ
ಚಾಜಕ್ಕ ಮಳವಳ್ಳಿ
ಪೂಜಕ ಬೊಪ್ಪಣಪುರ
ನಾಮಕರಣ ಮಾಡಬೇಕು
ಬೊಪ್ಪಗೌಡನ ದುಡವ ಸ್ವಲ್ಪ
ನೋಡಬೇಕು ಅಂದರಂತಾ ||ಸಿದ್ಧಯ್ಯ ಸ್ವಾಮಿ ಬನ್ನಿ||

ಹಿಂದೇಳಟ್ಟಿ-ಮುಂದೇಳಟ್ಟಿ, ನನಕಂದ, ಏಳಟ್ಟಿಕುರಿ, ಏಳಟ್ಟಿಎಮ್ಮೆ, ಪುಣ್ಯವಂತ ಗೌಡ ಒಕ್ಕಲಾಗಿದ್ದಾನ. ಆ ಕುರಿಗೌಡನ ಕುರಿಕೊಟ್ಗ ಉರಿಗದ್ಗ ಆಗ್ಬೇಕು. ಮಾಚಿದೇವರ ಕತ್ತ ಕೊಟ್ಗ ಚಂದ್ರಶಾಲ ಆಗ್ಬೇಕು. ಉಬ್ಬಓಲಾ ಒಳಗ ಉಳಿಗಾ ಅರಮನೆ ಆಗ್ಬೇಕು. ಆ ಬೊಪ್ಪಗೌಡನ ದುಡವ ಸ್ವಲ್ಪ ನೋಡಬೇಕು ಅಂದರಂತಾ

ಕಂಡಾಯ ಹೊತ್ಕಂಡು
ತಂಬೂರಿ ಎತ್ಕಂಡು
ಕಾವಿ ಜೋಳಗ ತಂದಾ
ಕಂಕಳ್‌ಗ ಹಾಕಂಡು

ಎಲಕುಂದೂರು ಬೆಟ್ಟ
ಪ್ರೇಮದಲ್ಲಿ ಬಿಟ್ಟವರೆ
ಯಾವ ಮಾರ್ಗವಾಗಿ
ಮನೆದೇವ್ರ ಬತ್ತವರೆ
ಚಂದನಳ್ಳಿ ಚೊಟ್ಟಳ್ಳಿ
ವಡ್ಡ ಹೊಸಳ್ಳಿ
ದನಗೂರು ದಬ್ಬಳ್ಳಿ
ವೀರಗುಮ್ಮಳಪುರ
ಮಂದಲಗರೆ ಮಠ
ಕಾಡು ಬಸವನಕಟ್ಟಾ
ಕಂಚಗಲ್ಲಿ ಬೊರಾಣೆ
ಅಂಚಗಳ್ಳಿ ಕಡ್ಡವರೆ ||ಸಿದ್ಧಯ್ಯ ಸ್ವಾಮಿ ಬನ್ನಿ||

ಗುಂಡಪುರದ ಹೊಳಕರ್ಗ ನನ್ನ ರಾಜಗುರು ದಯವಾಗಿ ಅಶ್ವತ ಅರಳಿಕಟ್ಟೆ, ಚಂದ್ರ ಜಗಲಿಯ ಮೇಲಾ ಹಾಸಿದರಂತಾ ಹುಲ್ಲಚರ್ಮ ಹರಡಿದ್ದಾರ ಇಬ್ಬತ್ತಿಗಟ್ಟೆ

ಹರನ ಗುರುವು ಭಿಕ್ಷ
ಗುರು ಸಂಗಯ್ಯನ ಭಿಕ್ಷ
ಆದಿ ಎಲವರ ಭಿಕ್ಷ
ಸಟುಗ ಸಂಗಯ್ಯನ ಭಿಕ್ಷ
ಮಾಮೂರ್ತಿಗಳ ಭಿಕ್ಷ
ಮುಕ್ಕಣೇಶನ ಭಿಕ್ಷ
ಬೊಪ್ಪೇಗೌಡನ ಮನೆಯ
ಮುಂದೆ ಮೊದಲ ಭಿಕ್ಷ ಅಂದರಯ್ಯ ||ಸಿದ್ಧಯ್ಯ ಸ್ವಾಮಿ ಬನ್ನಿ||

ಹೊತ್ತಿನಂತೆ ಬಾ ಹೋಗು
ಅಕ್ಕಿಬೇಳೆ ಕೊಡ್ತೀನಿ
ಅಡ್ಡ ತಪ್ಪಲ ಕೊಡ್ತೀನಿ
ರಾಗಿಭತ್ತ ಬೇಕಾದ್ರ
ಜೋಳ್ಗ ತುಂಬಾ ಕೊಡ್ತೀನಿ
ಜೋಬ್ಗ ಕಾಸ್ ಕೊಡ್ತೀನಿ
ಹೆಚ್ಚು ಮಾತೊಂದಾಡಬೇಡ
ಹಟ್ಟಿ ಬಿಟ್ಟು ಹೊರಟೋಗು ಮಗ್ನೆ ||ಸಿದ್ಧಯ್ಯ ಸ್ವಾಮಿ ಬನ್ನಿ||

ಗೌಡಣ್ಣಾ ಆಡಿದ ಮಾತಾ
ನನ್ನ ಗುರುದೇವ ಕೇಳ್ಕಂಡು
ನಿನ್ನ ಅಕ್ಕಿಬೇಳ್ಗೆ
ನಿನ್ನಾಟ್ಟಿಗಾ ಬರ್‌ಲಿಲ್ಲಾ
ರಾಗಿಭತ್ತಕ್ಕಾಗಿ
ನಿನ್ನ ಮನೆಗೂ ಬರಾಲಿಲ್ಲಾ ॥ಸಿದ್ಧಯ್ಯ ಸ್ವಾಮಿ ಬನ್ನಿ॥

'ಗೌಡಣ್ಣಾ, ನಾ ನೋಡದ್ರ ಎಪ್ಪತ್ತು ವರ್ಷದ ಮುಪ್ಪಿನ ಕಾಲದ ಮುದಕಯ್ಯ. ನನ್ನ ಕಣ್ಣು ಕಾಣ್ತಾ ಇಲ್ಲ. ಎರಡು ಕರಣ ಕೇಳ್ತಾ ಇಲ್ಲಾ. ಏಪ್ಪತ್ತೇಳು ಕುಡ್‌ಜಡ ಕುಣ್‌ಕಾಲಗಂಟ ಇದ್ದದಾ. ಈಶಾನ್ಯ ಮೂಲ ಒಳಗ ಕಣ್ಣೆತ್ತಿ ನೋಡು, ಬಿರುಗಾಳಿ ಬಿರ್‌ಮಳ ಬರ್‌ತಿದ್ದಾದ. ಈ ಮಳಗಾಳಿ ಒಳಗ ಮುಸಂದಾ ಟೇನಂಲ್ಲಿ, ನಿನ್ನ ಮನ ಮುಂಬಾಗಿಲ ಬಂದ್ ಬಿಟ್ಟಿದ್ದಿನ' ಈ ಮಳೆಗಾಳಿ ನಿಲ್ಲುವವರೆಗೆ ನಿನ್ನ ಮುಂಬಾಗಲ ಬಿಟ್ಟು ಒಂದು ಹೆಜ್ಜನೂ ಮುಂದಿಡಲಾರಿ.

ಕಾಕೋಳಿ ಕೂಗಗಂಟ
ಲೋಕ ಬೆಳಗಾಗಗಂಟ
ನಿನ್ನ ಹಟ್ಟಿಯೊಳಗ ಗೌಡ ನನ್ನ
ಒಂದು ಗಳ್ಗ ಜಾಗ ಕೋಡೋ ॥ಸಿದ್ಧಯ್ಯ ಸ್ವಾಮಿ ಬನ್ನಿ॥

ಧರೆಗೆ ದೊಡ್ಡವರ್ಗ ಬೊಪ್ಪಗೌಡ ಹೇಳ್ದ 'ಎಲಾ ತಿರಕಾ, ಇವೊತ್ತು ನನ್ನ ಹಟ್ಟಿಒಳಗ ಜಾಗ ಕೇಳ್ತಿಯಲ್ಲಾ ಹನ್ನೆರಡ ಕಂಬದಟ್ಟಿಯ ನಿಮ್ಮಪ್ಪಾಕಟ್ಟಿಸಿ ಮಡಿಗಿದ್ದಾನುಡ ಹೆಚ್ಚು ಮಾತೊಂದು ಆಡದೆ ನನ್ನ ಹಟ್ಟಿ ಬಿಟ್ಟು ಆಚೆಗೋಗು.' 'ಹನ್ನೆರಡ ಕಂಬದಟ್ಟಿ ನಮ್ಮಪ್ಪಾ ಕಟ್ಸಿ ಮಡಿಗಿದ್ದರ, ನೀ ಇಂಥಾ ಮಾತಾಡಕಾಯಿತಿತ್ತಾ ಲಕ್ಷಾಂತರ ರೂಪಾಯಿ ಮುಟ್ಟಿ ನೀ ಹಟ್ಟಿ ಕಟ್ಟೀರಬೌದು. ಹೊತ್ತು ಬೀಳಗಂಟ ನಿನಗೆಲ್ಲಾ ಅಧಿಕಾರವುಂಟು. ಹೊತ್ತು ಬಿದ್ದ ಮೇಲಾ ಹೊಸ್ತಿಲಾದಚೆಗೆ ನಿನ್ನ ಅಧಿಕಾರ.

ಹೊಸಾರು ಅನ್ನೋದು
ಹೊರಗಿನವರ್ಗ ಕಾಣೋ
ಈ ಪಡಸಾಲೆಯನ್ನೊದು
ನಮ್ಮಂತ ಪರದೇಶಿಗಳ್ಗ ಅಂದನಂತೆ ॥ಸಿದ್ಧಯ್ಯ ಸ್ವಾಮಿ ಬನ್ನಿ॥

'ಈ ಪಡಸಾಲೆ ಅನ್ನೋದು ನಮ್ಮಂತ ಪರದೇಶಿಗಳ್ಗ ಕಾಣೋ. ನನ್ಗ ಜಾಗ ಕೊಡದೆ ಇದ್ರು ಚಿಂತಿಲ್ಲಾ, ನನ್ನ ಕತ್ತಲ್ಲಿ ಕಟ್ಟಿರಾಮಣೆ, ಎದೆಯ ಮೇಲಿನ ತಂಬೂರಿ, ಅಪ್ಪಾಜಿಯವರ ಕಂಡಾಯಕ ಅಂಗೈ ಅಗಲ ಜಾಗಕೊಡು' ಅಂದ್ರು ಧರೆಗೆ ದೊಡ್ಡವರು. ಬೊಪ್ಪೇಗೌಡ ಹೇಳ್ದ 'ನಿನಗೇ ಅಂದ್ರಾ ಖಂಡಿತವಾಗಿ ಜಾಗ ಕೊಡತಿರಲಿಲ್ಲಾ. ಅಪ್ಪಾಜಿಯವರ ಬಿರುದ್ಗಾ ಮರ್‍ಯಾದಿ ಕೊಟ್ಟು ನಾನು ಜಾಗ ಕೊಡ್ತೀನಿ. ಬೆಳ್ಳಿಮೂಡಿ ಬೆಳಕರಿಂಯೋ ಹೊತ್ತಿಗೆ

ನನ್ನಜಾಗ ನಮಗ ಬಿಟ್ಟುಕೊಡದೆ ಹೋದ್ರ ಕುರಿದೊಣ್ಣಿ ತಕ್ಕಂಡು ತಲಾಮಾರ್ತ್ನ ಊರ್ತೀನಿ' 'ಶಭಾಸ್ ನನ್ನಕಂದಾ, ಇವೊತ್ತು ತುಂಬಿದ ಸೋಮಾರ ನಾಳಾ ಮಟ್ಟಮಂಗಳವಾರ ಎಲ್ಲಿ ಕೊಡ್ತಿಯೋ ಬೊಪ್ಪೇಗೌಡ' ಆದರವಾಗಿ ಕೇಳ್ದ 'ನಿಮ್ಮಂಥ ದಾಸಯ್ಯ-ಜೋಗಯ್ಯ, ಹರುಕರು ತಿರುಕರು, ಗುಡ್ಡ ಗುರುವಯ್ಯಗಳ್ಗ ನಡಟ್ಟಿ, ನಡತೊಟ್ಟಿ ಒಳಗಾ ಜಾಗ ಕೊಡಾದಿಲ್ಲ' ಅಂದಾ, 'ಯಾಕಪ್ಪ, ಕೊಡಗಂಟ ನರಿಯಾಂಗ ಇರ್ತಿದ್ದರೀ, ಕೊಟ್ರ ಮೇಲಾ ಹುಲಿ ಆಯ್ತಿದ್ದರಿ'.

ದೇಶದೇಶದಾ ಮೇಲಾ
ಸೀಮಾ ಸೀಮಾ ಒಳಗಾ
ಈ ಗುರುಮಣಿ ಕಟ್ಟಿಕಂಡು
ಗುಡ್ಡನಾ ಬಿಡ್ಸಕಂಡು
ಭಿಕ್ಷಾ ಮಾಡಾ ಮುಂಡಾ ಮಕ್ಳಾ
ನೆಚ್ಚಬೌದ ಧರೆಯ ಮೇಲಾ ||ಸಿದ್ಧಯ್ಯ ಸ್ವಾಮಿ ಬನ್ನಿ||

ಏಳುಂಡಿ ಕುರಿಕೊಟ್ಗಿ
ಕಜ್ಜಿ ಹುಂಡಿಯೊಳಗ
ಮುರುಕ ಮಂಚಾ ಹಾಕ್ಸಿನಿ
ಹರುಕು ಚಾಪ ಹಾಸ್ಸಿನಿ
ಕುರಿಕೊಟ್ಗಿ ಒಳಗಾ
ಬಿದ್ದಿದ್ದು ಎದ್ದೋಗ ಮಗನಾ ||ಸಿದ್ಧಯ್ಯ ಸ್ವಾಮಿ ಬನ್ನಿ||

ನೀ ಜಾಗ ಕೊಡ್ತೀನಿ ಅಂದಾಗಲೇ
ನೀ ಕೆಟ್ಟಿಯಲ್ಲೊ ಬೊಪ್ಪಣ್ಣಾಗೌಡ ||ಸಿದ್ಧಯ್ಯ ಸ್ವಾಮಿ ಬನ್ನಿ||

'ನಾ ಕೇಳತಿದ್ದದ್ದು ಅದೇ, ಇವ ಕೊಡ್ತೀನಿ ಅಂದದ್ದು ಅದೆ' ಎಪ್ಪತ್ತೇಳು ಕುರಿ ಜಡೆಯ ನನ್ನ ಉತ್ತರ ದೇಶದ ಒಡೆಯ ಎಡಕ ಬಲಕ ಒದರವರಾ, ಹುಲ್ಲಚರ್ಮಹಾಸಿ, ಇಬತ್ತಿಗಟ್ಟಿ ಹರಡಿದ್ದಾರ, ಕಂಡಾಯ ಜಡ್ಡು ಭೂಮಿಗೆ ನಾಟಿದ್ದಾರ. ಚಕ್ಕರಮಟ್ಟಿ ಕಾಲ್ ಹಾಕ್ಕಂಡು ಮೂಡಿಬರೋ ಸೂರ್ಯನಾಗಿ, ಮುಳಗಿಬರೋ ಹೊತ್ತನಾಗೆ ಅಪ್ಪಾಜಿಯವರ ಕಂಡಾಯಕ್ಕ ಭಂಗಿನಿವೇದನೆ ಮಾಡುತಾರ. ಮೂಡಾ ಪಡ್ಲು, ತೆಂಕಾ ಬಡ್ಗಲೂ ಹಾರೈಸಿ ನೋಡುತಾರ

ಬೊಪ್ಪೇಗೌಡನ ದೊಡ್ಡಿ
ನಡುರಾಜ್ಯ ಅಂಥಾ ಹೇಳಿ
ಇದು ರಾಜಾ ಬೊಪ್ಪಣಪುರ ಅಂಥಾ
ನಾಮಕರಣ ಮಾಡ್ಬೇಕು ||ಸಿದ್ಧಯ್ಯ ಸ್ವಾಮಿ ಬನ್ನಿ||

ಯಾವಾಗ ಭಂಗಿ ಕುಡ್ದ ಗ್ಯಾನದಲ್ಲಿ ಮಹಾನುಭಾವ ಧರೆಯೆತ್ತಿದ ಮಹಾಮೂರ್ತಿ ತುಂಬಿದ ಸೋಮಾರ ದಿವ್ಸ ದನ ಕುರಿ ಹಾಡಿನ ಹುಂಡಿಗೆ 'ಉಪ್ಪೊ' ಅಂಥಾ ಉರುಬಿದ್ದಾರ.

ಏಳು ಸಾವಿರ ಗೊಲ್ಲ್ನಗುರಿಗಳ್ಗೆ
ಕಪ್ಪರೋಗ ಬಂದೋಯ್ತು
ಏಳುಂಡಿ ಎಮ್ಮೆಗಳ್ಗೆ
ನಾಗೇರು ಬಂದೋಯ್ತು
ದೊಡ್ಡಿ ದನಗಳಿಗೆಲ್ಲಾ
ದೊಡ್ಡ ರೋಗ ಬಂದೋಯ್ತು
ಹಟ್ಟಿಲಿರ ಹೋರ್‌ಗಳಿಗೆಲ್ಲಾ
ಚಪ್ಪರೋಗ ಬಂದೋಯ್ತು
ಕಟ್ಟಿ ಕಟ್ಟಿದ ಗೊತ್ತಲ್ಲಿ
ಪಟ್ಟನ ಪ್ರಾಣ ಬಿಟ್ಟವಂತಾ ||ಸಿದ್ಧಯ್ಯ ಸ್ವಾಮಿ ಬನ್ನಿ||

ಬೊಪ್ಪೇಗೌಡ ಎದ್ದು 'ಬೀದಿಯೊಳಗಾ ಭಿಕ್ಷ ಮಾಡುವ ತಿರುಕ್ನಗಾ ಜಾಗ ಕೊಟ್ಟಿದ್ದಿ ಹೊಂಟಗಿದ್ದನಾ, ಇದ್ದನಾ, ನೋಡಾಮು' ಅಂತಾ ಬಂದಾ. ಏಳು ಸಾವಿರ ಗೊಲ್ಲ ಗುರಿಗಳ ಕಪ್ಪರೋಗ ಬಂದಿತ್ತು. ದೊಡ್ಡ ದನಗಳಗೆಲ್ಲಾ ನಾಗೇರು ಬಂದಿತು. ಬೊಪ್ಪೇಗೌಡ ಅಪ್ಪಾಜಿಯವರ ಪಾದಕ್ಕ ಶರಣ ಮಾಡ್ದ. 'ಅಪ್ಪಾಜಿ ಇಂಥವರು ಅನ್ನೋದು ಗೊತ್ತಿಲ್ದೇ ಹೋಯ್ತು, ನಿಂದ್ಸ ಆಡಿದ್ದೀನಿ, ನಿರ್ಮೂಲ ಮಾಡಬ್ಯಾಡ, ಹಾಸ್ಯ ಮಾತಾಡ್ಚಕ್ಕ ನನ್ನಟ್ಟಿ ನಾಸ್ನ ಮಾಡಬ್ಯಾಡಿ, ಹಟ್ಟಿ ದನನೆಲ್ಲಾ ಒಕ್ಕಲೆಬ್ಚಿ ಬಾಳ್ಸ ಕೊಟ್ರ ನಿಮ್ಗ ಹನ್ನೆರಡು ಅಂಕಣ ಗುಡಿ ಕಟ್ಟಿಕೊಡ್ತಿನಿ' ಅಂದಾ. 'ಛೆ! ನರಮುಂಡಾ ಮಕ್ಕಳಗಾ ನಾಲಿಗ ಸಂದಿಲ್ಲಾ, ಹಸ್ಸದಾಗ ಶಿವಶಿವ ಅಂತೀರಿ. ಹೊಟ್ಟಿ ತುಂಬಿದಾಗ ಸಿಡಿಸಿಡಿ ಅಂತೀರಿ. ಈ ಕಂಡಾಯ ಮುಟ್ಟು ಮುಂಡಾ ಮಗ್ನೆ'. ಬೊಪ್ಪಗೌಡ ಘನಶರಣ. 'ಈ ಕಂಡಾಯದ ಪಾದಸಾಕ್ಷಿಯಾಗಿ ನೀ ಕೇಳದ್ದ ಜಾಗ ಕೊಡ್ತೀನಿ' ಅಂತೇಳ್ದ, ಧರೆಗೆ ದೊಡ್ಡವರು ಕಪ್ಪುಧೂಳ್ತವನ್ನು ಇಟ್ಟಿದ್ದಾರ, ಏಳು ಸಾವಿರ ಗೊಲ್ಲಗುರ್‌ಗಳು 'ಗೊಲ್ಲೊ' ಅನ್ಕಂಡು ಎದ್ದು ನಿಂತಿದ್ದಾದ. ಏಳುಂಡಿ ಎಮ್ಮೆ 'ಅಮ್ಮ' ಅಂತಾ ಅರಚಿದ್ದಾವ. ಹಟ್ಟಿ ದನಗಳೆಲ್ಲಾ ಬೆಚ್ಚಿಬೆರಗಾಗಿ ನಿಂತ್ಕಂಡ್ವು. 'ಯಾವ ಜಾಗಬೇಕುಂತಾ' ಕೇಳದ್ರು ಶರಣೆಯಾದ ನಿಂಗಮ್ಮ ಬೊಪ್ಪೇಗೌಡನ ಘನಶರಣ.

ಈ ಕುರಿಕೊಟಗ ನನ್ಗ
ಧಾರೆನಾದರು ಎರಿ ಮಗನೆ ||ಸಿದ್ಧಯ್ಯ ಸ್ವಾಮಿ ಬನ್ನಿ||

'ಈ ಹಟ್ಟಿ ನನಗೆ ಬೇಡ. ನಿನ್ನ ಹುಟ್ಟಿದ ಜಾಗೂ ಬೇಡ. ನಾ ಕುಂತಿರುವಂತ ತಳಾ ಈ ಕುರಿಕೊಟ್ಗ ನನಗ ಉರಿಗದ್ಗ ಆಗಬೇಕು'. ಶರಣೆಯಾದ ನಿಂಗಮ್ಮ ಬೊಪ್ಪೇಗೌಡ ಘನಶರಣ ತಾರ್ಸಿ ರಂಗೋಲಾ ಬಿಟ್ಟಿದ್ದಾರ, ಹಸಾಮಣೆಯನ್ನು ತಂದು ಮಡಿಗಿದ್ದಾರ.

ಚೆಂಬ್ಲಾಲ ತಂದು
ಗರ್ಕಪತ್ರ್ಯ ತಂದು
ಕೊಂಡ ಮಾವಿನ ಪತ್ರಿ
ಪಿಂಜಿ ಕಟ್ಕಂಡು
ಪನ್ನೀರು ತಂದು
ಪಾದವ ತೊಳ್ದು
ಬಸವಣ್ಣನ ಹೆಸ್ರ ಹೇಳಿ
ಭಸ್ಮಂಗ ಧರಿಸಿದ್ದಾರ
ತುಂಬಿಪುಷ್ಪ ತಂದು
ಲಿಂಗ ಪೂಜಾ ಮಾಡಿ
ನಿನ್ನ ಹರ್ಕಾ ನೀ ಒಪ್ಸಕಪ್ಪಾ ||ಸಿದ್ಧಯ್ಯ ಸ್ವಾಮಿ ಬನ್ನಿ||

ನಿನ್ಗ ಹಾಲು ಮತಸ್ಥಗೌಡ
ಅಂತಾ ನಾಮಕರಣವಾಗಲಿ
ನಿನ್ನ ಕುರಿಕಾಯದೊಣ್ಣ
ನಾಳಾ ನಂದಿಕಂಬ ಆಗಲಿ
ಗೋಣಿ ಗುಬ್‌ಗೋಟಾ
ಕುರಬರ ಬೀರದೇವ್ರ ಸತ್ತಗ
ನಿನ್ನ ಜಾತಿಯವರು
ನಿನ್ನ ಕುಲದವರು
ನಮ್ಮ ಮನ 'ಕಿರುದೇವ್ರು' ಅಂತಾ
ಹೊತ್ತುಕೊಂಡು ಮೆರೆಯಲಪ್ಪಾ
ವೀರ್ ಚಾವಟಿ ಹೊಡ್ಕಂಡು
ಬೀರದೇವರ ಹೊತ್ಕಂಡು
ಕುರುಬರ ಕೂಟ ಅಂತೇಳಿ
ಕುಣಿದು ಮೆರಲಿಯಪ್ಪಾ
ಹಾಲುಘಟ್ಟ ಕೊಪ್ಪಲು ಅಂತಾ
ಹಾಲು ಮತಸ್ಥ ಗೌಡ
ಒಕ್ಕಲೆಬ್ಬು ಮಾಡುತಿನಿ ||ಸಿದ್ಧಯ್ಯ ಸ್ವಾಮಿ ಬನ್ನಿ||

'ಈವೊತ್ತು ಹಟ್ಟಿ ನಿನ್ನ ವಶವಾಯ್ತು. ಕೊಟ್ಗ ನಿನ್ನವಶವಾಯ್ತು. ನನ್ನ ಮಡದಿ ಮಕ್ಕಳ ಕಟ್ಕಂಡು ನಾ ಯಾವ್ ದಿಕ್ಕು ಹೋಗಲೆಪ್ಪಾ ಪ್ರಭು' ಅಂದಾ. ಧರೆಗೆ ದೊಡ್ಡವರು

ಹೇಳಿದ್ರು, ಮೂಡ್ಲಾಗು ಹೋಗಬೇಡ, ತೆಂಕ್ಲನಾಗಗೋಗಬೇಡ, ಬಡ್ಲಾಗಿ ಹೋಗಬೇಡ, ಪಡಲಾಗ ಹೋಗು. ಮೂರ್ ಮೈಲಿ ದೂರ. ಆಲದ ಮರದ ತೋಪು ತಲ್ಲಣ್ತದಾ. ಹಾಲದಮರದ ಅಂಡಿನೊಳಗಾ ತರ್‍ಗಗೂಡ್ಸಿ ಮನ ಮಾಡು ಅನೇಕ ದಿಸ್ಸಗಂಟಾ. ನಾನು ಮಾರಳ್ಳಿಗೋಗಿ ಮಗ್ನ ತಕ್ಕಬಂದು. ಕಾಳಿಂಗನ ಕಲ್ಲಗವಿಗ ಎಸ್ಟಾಗ ಮಾರಳ್ಳಿ ದುಂಬುಧೂಳು ನನ್ನ ಮಂಡ್ಯ ಕೌಸ್ಕಂಡಾಗ, ಕುಕ್ಕೂರು ತಲಕಾಡು ಮಾಲಂಗನ ಮಡಿ ಸ್ನಾನಕ್ಕೊಗ್‌ಬಟ್ಟು ಬರಾತನಕ ನೀನು ಅಲ್ಲಿರು ಕಂದಾ'

**ಅಡಿಟಿಪ್ಪಣಿ**

ನೀಲಗಾರ ಮೋಳೆ ರಾಜಣ್ಣ ಬೊಪ್ಪೇಗೌಡನಪುರದ ಸಾಲು ಪ್ರಾರಂಭವಾಗುವುದಕ್ಕೆ ಮೊದಲ ಒಂದು ಪ್ರಸಂಗವನ್ನು ಸೃಷ್ಟಿಸುತ್ತಾನೆ. ಉಳಿದ ಮೂರು ಸಂಪಾದಿತ ಪಠ್ಯಗಳಲ್ಲಿ ಕೆಬ್ಬೇಪುರದ ರಾಚಯ್ಯನ ಮೌಖಿಕ ಪಠ್ಯದಲ್ಲಿ ಈ ಪ್ರಸಂಗವಿಲ್ಲ.

ಆದ್ದರಿಂದ ಈ ಪಠ್ಯಕ್ಕೆ ತಂದುಕೊಂಡಿಲ್ಲ.

**ಪ್ರಸಂಗದ ವಿವರಣೆ:** ಗುಂಡಾಪುರದ ಕೆರೆ ಏರಿ ಮೇಲೆ ಹೋಗುತ್ತಿದ್ದ ಬೊಪ್ಪೇಗೌಡನನ್ನು ಹೆಸರು ಹಿಡಿದು ಕರೆಯುತ್ತಾರೆ. ಇದರಿಂದ ಕೋಪಗೊಂಡ ಅವನು ಧರೆಗೆ ದೊಡ್ಡವರನ್ನು ನಿಂದಿಸಿ ಮಾತನಾಡುತ್ತಾನೆ. ಮಂಟೇಸ್ವಾಮಿಗಳು ನಾನು ಧರೆಎತ್ತಿದ ಮೂರ್ತಿ ಧರೆಗೆ ದೊಡ್ಡವನು ಎಂದು ವಿವರಿಸಿದಾಗ ಅವರ ಕಾಲಿಗೆ ಬಿದ್ದು ಕ್ಷಮೆ ಕೇಳುತ್ತಾನೆ. ಮನೆಗೆ ದಯಾಮಾಡಿ ಎಂದು ಕರೆಯುತ್ತಾನೆ. ಆದರೆ ಮಂಟೇಸ್ವಾಮಿಗಳು ನನ್ನ ಕಂಡಾಯಕ್ಕೆ ಭಂಗಿಸೇವೆ ಮಾಡಿಸು ಎಂದು ಕೇಳುತ್ತಾರೆ. ಇದಕ್ಕೆ ಗೌಡ ಒಪ್ಪಿಕೊಂಡಾಗ ಎಲಾಕುಂದೂರು ಬೆಟ್ಟದ ಕಾಳಿಂಗನ ಕಲ್ಲುಗವಿಯ ಮುಂದೆ ಇರುವ ಕಂಚು ಬಾವಿಯಲ್ಲಿ ಅಂಗ್ಯೆಯಗಲ ಹೊಂಗೆ ಮರದ ಎಲೆಯಿದೆ. ಅದರಿಂದ ಚಿಲುಮೆ ಮಾಡಿಕೊಟ್ಟರೆ ಮಾತ್ರ ಭಂಗಿ ಸೇವನೆ ಮಾಡುವುದಾಗಿ ಕೇಳುತ್ತಾನೆ. ಗೌಡ ಎಲಾಕುಂದೂರುಬೆಟ್ಟ ಎಂದರೆ ನನ್ನ ಎದೆಗರ್ಭ ನಡುಗುತ್ತದೆ. ಹುಲಿ ಕರಡಿ ದೊಡ್ಡನಾಯಿ ಕಾಡೆಮ್ಮೆ ಹಾವುಚೇಳುಗಳೆಲ್ಲಾ ತುಂಬಿದೆ. ಹೇಗೆ ಹೋಗಲಿ ಎಂದು ಕೇಳುತ್ತಾನೆ. ಆಗ ಮಂಟೇಸ್ವಾಮಿಗಳು ತಮ್ಮ ಮುತ್ತಿನ ಜೋಳಿಗೆಯಿಂದ ಕಪ್ಪು ಧೂಳ್ತ ಕೊಡ್ತಿನಿ ಅದರ ಶಕ್ತಿಯಿಂದ ನೀ ಎಲ್ಲಾವನ್ನು ಜಯಿಸಿಕೊಂಡು ಬರಬಹುದು ಎಂದು ಹೇಳುತ್ತಾರೆ. ಆಗ ಗೌಡ ನನ್ನ ಕುರಿಗಳನ್ನು ಯಾರು ನೋಡಿಕೊಳ್ಳುವವರು ಎಂದು ಕೇಳುತ್ತಾನೆ. ಮಂಟೇಸ್ವಾಮಿಗಳು ಮತ್ತೆ ಕಪ್ಪು ಧೂಳ್ತವನ್ನು ತೆಗೆದು ಏಳುಸಾವಿರ ಗೊಲ್ಲಗುರಿಗಳನ್ನು ಗೋಗಲ್ಲುಗಳಾಗಿ ಮಾಡುತ್ತಾರೆ. ಗೌಡ ಯಾಕೆ ಬುದ್ದೀ ಈ ಶಾಪ ಎನ್ನುತ್ತಾನೆ. ಅದಕ್ಕೆ ಮಂಟೇಸ್ವಾಮಿಗಳು ನನ್ನ ಪುಟ್ಟಪಾದ ನೋಯುತ್ತದೆ, ನಿನ್ನ ಕುರಿಗಳು ಓಡಾಡಬಹುದು, ನಾನು ಓಡಾಡಲು ಸಾಧ್ಯವಿಲ್ಲ, ನೀನು ಹೊಂಗೆ ಎಲೆಯನ್ನು ತಂದು ಕೊಟ್ಟಮೇಲೆ ಗೋಗಲ್ಲಗಿರುವ ಕುರಿಗಳನ್ನು ಮತ್ತೆ ಕುರಿಗಳಾಗಿ ಮಾಡಿಕೊಡುತ್ತೇನೆ ಎಂದು ಹೇಳುತ್ತಾರೆ. ಇದರ ನಂತರ ಗಾಯಕ ಬೊಪ್ಪೇಗೌಡನ ಸಾಲಿನ ಕತೆಗೆ ಬರುತ್ತಾರೆ.

೭

# ಕೆಂಪಾಚಾರಿ ಪಡೆದ ಸಾಲು

ಯಾವಾಗ ಬೊಪ್ಪಗೌಡನ ಹಟ್ಟಿಂಯಲ್ಲಿ ಕುತ್ಕಂಡು ನಮ್ಮಪ್ಪಾಜಿ. 'ಕೇಳವ್ವಾ ದೊಡ್ಡಮ್ಮ ಮಠ ಮನಗ ನಾ ಒಕ್ಕಲ ಪಡದೀನಿ, ಆದ್ರ ಈ ಮಠನಾ ಮಾಡಾಕ ಒಬ್ಬ ಸಿಸುಮಗನ ಪಡಿಬೇಕು' ಅಂದ್ರು. ಆಗ ಜಗನ್ಮಾತೆಯಾದ ದೊಡ್ಡಮ್ಮತಾಯಿ 'ಅಪ್ಪಾಜಿ, ಯಾವ ಜಾತಿ ಒಳಗಾ, ಯಾವ ಕುಲದೊಳಗಾ' ಅಂತಾ ಕೇಳದ್ರು 'ಕೇಳು ದೊಡ್ಡಮ್ಮ ನಿಡಘಟ್ಟ ಅಣ್ಣೋಜಿ ಮಗ ಬಾಚಿ ಬಸವಣ್ಣಚಾರಿ ಅವ್ನ ಹೆಂಡ್ತಿ ಭಕ್ತಿವುಳ್ಳ ಮುದ್ದಮ್ಮ ನಿಡಘಟ್ಟದಲ್ಲಿ ಉಣ್ಣಾಕ ಅನ್ನ ಇಲ್ದೆ ಉಡೋಕಾ ಬಟ್ಟೆ ಇಲ್ದೆ ಗಂಡಾ ಹೆಂಡಿರ್ಲಾ ಒಂದ್‌ಪಾಡೆಯಾಗಿ ನಿಡುಘಟ್ಟವನ್ನು ಬಿಟ್ಟು ಬಾಳ ಬಡತನದಿಂದ ಮಾರಳ್ಳಿ ಗ್ರಾಮಕ್ಕೆ ಸೇರ್‌ಒಕ್ಕಲಾಗಿ ಬಂದ್ರು. ಆರು ಮಂದಿ ಗಂಡು ಮಕ್ಳು ಹೊಟ್ಟಒಳ್ಗ ಹುಟ್ಟಿದ್ರು, ಭಾಗ್ಯ ಅನ್ನೊದು ಬರಲಿಲ್ಲಾ. ಏಳನೇ ಗರ್ಭದಲ್ಲಿ ರತ್ನ ಗರ್ಭದಲ್ಲಿ ಬಂಗಾರದ ಗೊಂಬ, ಭಾಗ್ಯವುಳ್ಳ ಕೆಂಪಣ್ಣ ಹುಟ್ಟಿದ್ದಾನ.

ಮುತ್ತು ಮೂಗಳವಾಯ್ತು
ರತ್ನ ನಾಗಳವಾಯ್ತು
ಮೊರದ ಬಂಗಾರವಾಯ್ತು
ಮುತ್ತಿನ ಮುಂಬಾಗ್ಲು
ರತ್ನದ ತೊಲಗಂಬಾ
ಅವಳದಲ್ಲಿ ಅರ್‌ಗ್ವಾಡ
ಅಪರಂಜಿ ದಾರಂದ
ಕಂಚಿನ ಕೊಮಾರ
ಕಬ್ಬಿಣದ ತೊಲಗಂಬ
ಬೆಳ್ಳಿ ಉರ್‌ವರೇ
ಗಳಗಳ್ಳ ಬೀಸ್‌ವರೇ
ಚಿನ್ನದ ತಂತಿ ಒಳಗೆ
ಹಂಜರಗಳ ಬೀಸವರೇ

ಬ್ರಹ್ಮಪಂಚಾಲದವರು
ಮೇಲಾ ದಬ್ಬಾಕಿರದೆಲ್ಲಾ
ತಾಮ್ರದ ಬಿಲ್ಲಿ ಅಂಚು ||ಸಿದ್ದಯ್ಯ ಸ್ವಾಮಿ ಬನ್ನಿ||

ಪಾದ ತೊಳೆಯೊಕಲ್ಲು ಚಿನ್ನದ ಪಚ್ಚಾಕಲ್ಲು, ಎತ್ತು-ಕರಾ ಕಟ್ಟಾಕ ಗೂಟವೆಲ್ಲಾ ಚಿನ್ನಬೆಳ್ಳಿಗೂಟ. ರತ್ನ ಚಿನ್ನದ ಮಂಚ, ಬ್ರಹ್ಮ ಪಂಚಾಲದವರ್ಗ. ಇದು ಅಲ್ಲದೆ ನನಕಂದ ಕಿರಿಯವನು ಹುಟ್ಟಿದಾಗ ಮಾರಳ್ಳಿ ಗ್ರಾಮಕ್ಕೆ ಮನೆಯಲ್ಲಿ ಇಲ್ಲದ ಭಾಗ್ಯ ಬಂದ್ ಬಿಡ್ತು.

ಆ ಮಾರಳ್ಳಿಗ ನಾ ಹೋಗಲೇ
ಕೆಂಪಚಾರಿ ತರಲೇ ಬೇಕು ||ಸಿದ್ದಯ್ಯ ಸ್ವಾಮಿ ಬನ್ನಿ||

ಧರೆಗೆ ದೊಡ್ಡವರು ಮುದ್ದಮ್ಮನ ಮನೆ ಮುಂದೆ ತುಂಬಿದಾ ಸೋಮಾರ ದಿಪ್ಪ ಮುಸ್ಸಂಜೆ ಟೇಮಿನಲ್ಲಿ ಭಿಕ್ಷಾ ಸಾರಿದ್ದಾರ. ಶರಣೆಯಾದ ಮುದ್ದಮ್ಮ, ಕರಂಡ ಕಾಲಲ್ಲಿ ಇಟ್ಕಂಡು, ಕಾಮಧೇನು ಕರೀತಿದ್ದ, ಜಂಗಿನ ಶಬುದಕ್ಕೆ ಕಾಮಧೇನು ಬೆದರಿ ಕಾಲಿನಲ್ಲಿದ್ದ ಕರಂಡನ ಪಟ್ನೇರನ ಒದ್ದು ಬಿಡ್ತು. ಹಂಡ ಒಳಗಿದ್ದ ಹಾಲು ಭೂಮಿ ಪಾಲಾಯ್ತು, ಹಂಡವೊಂದಿಕ್ಕ ಮಂಟ್ಕಿತು. ಕರಾತಿದ್ದ ಮುದ್ದಮ್ಮ ಒಂದ್ ದಿಕ್ಕಾ ಮಂಟಕ್ಕಂಡ. 'ನಾನು ಮಂಟ್ಕಿಡಂಗ ನಿನ್ನ ಮನ **ಮಂಟೋಗ್ಲಿ** ಮುಂದಕ್ಕಾ ಹೋಗಪ್ಪಾ'

ಮುದ್ದಮ್ಮಾಡಿದ ಮಾತು
ಮಾದೇವರು ಕೇಳ್ಕಂಡು
ಈಗಂದಾ ಮಾತನ್ನು
ಇನ್ನೊಂದು ಸಾರಿ ಅನ್ನು ಮಗಳೆ ||ಸಿದ್ದಯ್ಯ ಸ್ವಾಮಿ ಬನ್ನಿ||

'ಈವಾಗ ನಾ ಹುಟ್ಟಿದ ಪವಾಡ ಹೇಳ್ತೀನಿ ಗ್ಯಾನವಾಗಿಟ್ಟಕೋ. ಮೊಟ್ಟಮೊದಲು ಓಂಕಾರಮಯ ಸ್ವರೂಪನಾಗಿ **ಆದಿ ಸಂಗಮೇಸ್ವರ** ಆಗಿದ್ದಿ, ಆಕಾಶ ಆದಿ ತರಬೇಕುಂತಾ ಹೇಳಿ ಉತ್ತರಕಾಂಡದಿಂದ ಉತ್ಪತ್ತಿ ಆಗಿದ್ದಕಾ **ಉತ್ತರ ದೇಶದ ಸಿದ್ದ** ಅಂದ್ರು. ಕತ್ತಲ ರಾಜ್ಯಕ್ಕೆ ಬೆಳಕ ತಂದದಕಾ **ಜ್ಯೋತಿಲಿಂಗಯ್ಯ** ಅಂದ್ರು. ಆದಿ ಕಲ್ಯಾಣದಲ್ಲಿ **ಕಲ್ಯಾಣದಯ್ಯ** ಅಂದ್ರು. ಜಲಜಾಂಬವಂತನನ್ನು ಸಂಹರಿಸಿ ಧರೆ ತಂದದಕಾ **ಧರೆಗೆ ದೊಡ್ಡವರು** ಅಂದ್ರು. ಇವೊತ್ತು ಕಂದಾ, ಸಕರಾಯ್ನ ಮಾರಾಜನ ಪಟ್ನಕ್ಕ ಭಿಕ್ಷಾಕ ಹೋದಿ. ಆ ಮಾರಾಜ ನನ್ನ ವಿಷದ ಕಜ್ಜಾಯ ಇಕ್ಕಿಸ್ಸದ. ಅವ್ನ ಮನ ಕಜ್ಜಾಯವ ಅವ್ನ ಮಕ್ಕಳಗೇ ಕೊಟ್ಟು, ಸತ್ತೋದ ಮಕ್ಕಳ ಜನ್ಮ ಪಡಕಂಡು, ಕೊಡೇಕಲ್ಲಿನಲ್ಲಿ ಎರಡು ಕೊಂಡಮಕ್ಕಳ ತಕ್ಕಂಡದ್ದಕ್ಕಾ, **ಕೊಡಾಲಾದಯ್ಯ** ಅಂದ್ರು. ಕಾರಂಜಿ ಕೆರ ಒಳಗ ಕಾವಿಡೇರ ಹೊಡೆದು ಮೈಸೂರು ಮನಸ್ಥಾನಕ ಅರಸಿ ಚಿನ್ನದ ಕಂಡಾಯ ಅರಮನಲಿಟ್ಟು. ಕಾರಗಳ್ಳಿ ಮಾರನಾಯಕನ ಜಾತಿ ಪರಿವಾರದವರ್ಗ ಒಟ್ಟು ಮಾರಣಕೊಟ್ಟು. ಅಂಕಾರದಿಂದ ಅರಮನ ಹೆಣ್ಣು

ಕೀಳ್ ಬಂದುದ್ದಕ್ಕಾ ನಿಮ್ಮ ಜಾತಿ ಪರಿವಾರದವರ್ಗ ಆರ್‌ಬಡಾಯಿ, ತೋರ್‌ಬಡಾಯಿವಾಗಲಿ ದೇಶದ ಮೇಲೆ ನಿಮಗ ಹನ್ನೊಂದು ಬಣ್ಣವಾಗಲಿ. ಅರುಸಿ ಚನ್ನದ ಕಂಡಾಯ ಅರಮನಲಿಟ್ಟು ದುಡವಳ್ಳ ದೊಡ್ಡಮ್ಮ ತಾಯಿ ದತ್ತು ತಕ್ಕಂಡ್ಪಕ ಕಂದಾ, ಮೈಸೂರಲ್ಲಿ ನನ್ನ **ಮಾಗುರು** ಅಂದ್ರು. ತುರುಕಾಂಡ್ಯದಲ್ಲಿ ಮುಸ್ಲುಮಾನರು ಅರೆ ಅಲ್ಲಾಂತ ಹಸ್ತ ತೋರ್‌ದಕಾ **ಅಲ್ಲಮಪ್ರಭು** ಅಂದ್ರು. ಹೊನ್ನನಾಯಕನಳ್ಳಿಗ ಹೊನ್ನುಹುತ್ರವಾಗಿ ಗಂಗಡಕಾರ್ನಾಟ್ನ ಹಿಂಭಾಗದಲ್ಲಿ ಹೊನ್ನಯ್ಯ-ಚೆನ್ನಯ್ಯ ಎರಡು ಕಂಡಾಯವ ದೇಶದ ಮೇಲಾ ಮೆರೆಯದ್ನ **ಚೆನ್ನಮಂಟೇಸ್ವಾಮಿ** ಅಂದ್ರು. ಮುದ್ದಮ್ಮ ವಿಜಯನಗರ ಕೋಟೆಯೊಳಗೆ ನಾ ನೂರೊಂದು ಗಾರಡಿಗರೊಡನೆ ಮೋಡಿ ಎತ್ತಿ ಹಿರಿಗಾರ್ನಗಾನ ಮಗ ಹಿರಿಯವಳು ಹಿರಾಮಣಿ ಕಿರಿಚೆನ್ನಾಜಮ್ಮನ ದತ್ತು ತಕ್ಕಂಡಿ. ಹಾಕಿದ ಮೋಡಿ ಎತ್ತಬೇಕು ನಿಮ್ಮ ಗಾರ್ನಗರ ಜಾತಿವೊಳಗ ಮೋಡಿ ಹಾಕಲ್ಲಾಂತ ಹೇಳಿ ತಾಮ್ರ ತಗಡ್ನಿ ಚಪ್ಪೋಡು ಬರ್‌ಕೊಟ್ಟಿದ್ದಕಾ **ಘನಗಾರ್ಡರ ಗಂಡ** ಅಂದ್ರು.

ಇವೊತ್ತು ಹೊತ್ತುನಂತೆಯೆ
ಎದ್ದು ಕೈಕಾಲ ಮೊಖವ ತೊಳೆದು
ಕಂಡಾಯ ಹೊತ್ಕಂಡು
ತಂಬೂರ ಎತ್ಕಂಡು
ಕಾವಿ ಜೋಳ್ಗ ತೆಗ್ದು
ಕಂಕಳಗ ಹಾಕ್ಕಂಡು
ಮೊಟ್ಟ ಮೊದಲು ಮಗಳೆ
ನಿನ್ನ ಮನ ಬಾಕಲಗ ಬಂದದಕಾ
'ಮಂಟೇದ' ಅಂಥಾ
ನಾಮಕರಣ ಮಾಡಿದೆವ್ವಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಜಗತ್ತಲ್ಲಿ ದೇಶದ ಮೇಲಾ ನೀನು ಕರೆದ ಹೆಸ್ರು ಶಾಶ್ವತವಾಗಲಿ. ನಾಳಾ ಗುಡ್ನನ ಬುಟ್ಟಕ್ಕಂಡು, ಗುರುಮಣಿ ಕಟ್ಸ್ಕಂಡು, ಬೆತ್ತಜೋಳ್ಗ ಕಂಕಳ್ಗ ಹಾಕ್ಕಂಡು, ದೇಶದ ಮೇಲಾ ಭಿಕ್ಷಾ ಮಾಡವರಗೆಲ್ಲಾ ಮಂಟೇದಪ್ಪನ ಮಕ್ಳು ಅಂಥಾ ನಾಮಾಂಕಿತವಾಗಲಿ.

'ನಿನ್ಗ ಮಕ್ಕಳೆಷ್ಟು ಕಂದಾ', 'ಒಬ್ಬರಲ್ಲಾ ಇಬ್ಬರಲ್ಲಾ ಏಳುಮಂದಿ ಗಂಡುಮಕ್ಕ ಮಾರಳ್ಳಿಯೊಳಗ ಇದ್ದಾರ. ಭಿಕ್ಷಾ ತಕ್ಕಾ ಹಟ್ಟಿ ಬಾಗ್ಲ ಬಿಟ್ಟೋಗಾ' ಅಂದ್ಳು. 'ಅವ್ರ ಏಳ್ ಮಂದಿ ಗಂಡು ಮಕ್ಕಳಿಗಾ ಯಾವ್ ಯಾವ್ ಕೆಲಸಮ್ಮ'

ಒಬ್ಬನ್ಗ ಚಿನ್ನಗೆಲ್ಸ
ಒಬ್ಬನ್ಗ ಬೆಳ್ಳಿಗೆಲ್ಸ
ಒಬ್ಬನ್ಗ ಕಂಚುಗೆಲ್ಸ

ಒಬ್ಬನ್ನ ಹಿತ್ತಾಳಗೆಲ್ಸ
ಇನ್ನೊಬ್ಬನ್ನ ಮರಗೆಲ್ಸ
ಆರು ಮಂದಿ ಗಂಡ ಮಕ್ಕಳಗಾ
ಈ ಆರು ಗೆಲ್ಸ ಅಂದರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಕಿರಿಯವನು ಕೆಂಪಾಚಾರಿ
ಕಬ್ಬಿಣ ಕಛೇರಿ ಒಳಗ
ಕಬ್ಬಿಣ ಉದ್ಯೋಗದ ಕೆಲಸ ||ಸಿದ್ದಯ್ಯ ಸ್ವಾಮಿ ಬನ್ನಿ||

'ಎಲ್ಲರಕ್ಕಿಂತ ಕಿರಿಯವನಾದ ಏಳು ವರ್ಷದ ಎಳೆಯ ಕೆಂಪಾಚಾರಿ. ಅರವತ್ತಾರು ಆಳ್ ಕರ್ಕಂಡು ಎಪ್ಪತ್ತೇಳು ಕುಲಮಗಟ್ಟಿ ಹಾಕ್ಕಂಡು. ಶ್ರೀರಂಗಪಟ್ನದ ರಂಗಸ್ವಾಮಿ ಚಿನ್ನದ ತೊಲಾ ಗೇದು ಗರುಡಗಂಬ ಎತ್ತಿ ನಿಲ್ಸತನಕ ಆಳಗಳ್ಗ ಒಂದು ಕವಡ ಕಾಸ್ ಕೊಡದಿಲ್ಲಾಂತ ಬಿಟ್ಟಿ ಜೀತ ಗೇಯ್ತವ್ರೆ. ಇದು ನನ್ನ ಮನತನ. ಇದ್ರ ಸುದ್ದಿ ನಿನಸ್ಯಾಕ. ಭಿಕ್ಷಾ ತಕ್ಕಂಡು ಹಟ್ಟಿಬಿಟ್ಟು ಹೊರಟೋಗು' ಅಂದ್ರು. ಶರಣೆಯಾದ ಮುದ್ದಮ್ಮ. ಅಪ್ಪಾಜಿ ಹೇಳಿದ್ರು 'ಮನಾ ಒಳಗ ಹಿತ್ತಾಳ, ಬೆಳ್ಳಿ, ತಾಮ್ರ ಸಿಲವಾರ, ವಜ್ರ, ವೈಡೂರ್ಯ, ಮುತ್ತು, ರತ್ನ, ಅಕ್ಕಿ ಬತ್ತ, ರಾಗಿ ಧಾನ್ಯವೆಲ್ಲಾ ತುಂಬಿ ತುಳುಕಾಡ್ತದ. ವಂಚನಕಾರ ಮುಂಡೇ ಲಕ್ಷಮಿ ಇವೊತ್ತು ನಿನ್ನ ಮನಲಿ ಇದ್ದರಾ. ಇನ್ನೊಬ್ಬರ ಮನಗ ಮುಂದಲವರ್ಷಕ ಹೊರಟು ಹೋಯ್‌ತದಾ.

ನಿನ್ನ ಅರಮನೆಯಲ್ಲಿರುವ
ಮುತ್ತುರತ್ನವೆಲ್ಲಾ
ನನ್ನ ಮಠಮನೆಯ
ಮುಗ್ಗಲು ಜೋಳ
ಮಾಡದ ರಾಗಿ ||ಸಿದ್ದಯ್ಯ ಸ್ವಾಮಿ ಬನ್ನಿ||

ಧರೆಗೆ ದೊಡ್ಡವರ ಹೇಳಿದ್ರು 'ಕಂದಾ, ಆರು ಮಂದಿ ಗಂಡ ಮಕ್ಳಾ ನಿನ್ನ ಮಾರಳ್ಳಿ ಆಳಾದು ಸಾಕು. ಕಿರಿಮಗಾ

ಬಂಗಾರದ ಗೊಂಬ
ಭಾಗ್ಯವುಳ್ಳ ಕೆಂಪಣ್ಣ
ದಾನಕೊಂಡು ಅಂದರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಭಿಕ್ಷಕ ಬಂದವರು
ಬಿಸಿ ಅನ್ನ ಕೇಳ್ದಂಗಾ
ದುಡುಕು ಮುಂಡಾ ಮಗ್ನೆ
ನನ್ನ ಕಿರಿ ಮಗನ ಕೇಳಬೌದಾ

ಬಂಗಾರ ಕೇಳಪ್ಪಾ
ಬಂಡಿಕಟ್ಟಿ ಹೂಡ್ಸತೀನಿ
ಮುತ್ತು ರತ್ನ ಕೇಳು
ಜೋಳ್ಗ ತುಂಬಾ ತುಂಬ್ತೀನಿ
ಹೆತ್ತ ಮಕ್ಕಳ ಭಿಕ್ಷವಾ
ಯಾರು ತಾನೆ ಕೊಟ್ಟರಪ್ಪಾ ||ಸಿದ್ಧಯ್ಯ ಸ್ವಾಮಿ ಬನ್ನಿ||

'ಗುಡ್ಡನ ಬುಟ್ಟು ಮಗನ ಜಲ್ಮ ಸುದ್ಧ ಮಾಡ್ತೀನಿ, ಏಳು ಹನ್ನೆರಡು ಹತ್ತೊಂಬತ್ತು ವರ್ಷದ ಮಗನ್ನ ಒಂದ್ ದಿನ ಕಮ್ಮಿಯಾಗಿ ಆ ಗುಡ್ಡು ಗುಡ್ಡರಿಗೆಲ್ಲಾ ಇವ್ನ ಸಿದ್ಧಪ್ಪಾಜಿ ಮಾಡುತಿನಿ. ನಾ ಮರೆಯ ದೇವರಾದರ ಇವ್ನ ಮೆರೆಯ ದೇವರ ಮಾಡುತೀನಿ ನಾ ಒಳಗಲ ದೇವರಾದ್ರ ಇವ್ನ ಹೊರಗಲ ದೇವ್ರ ಮಾಡುತೀನಿ. ರಾಜಬೊಪ್ಪಣಪುರಕ ರಾಜನ ಮಾಡುತಿನಿ' ಎಂದರು ಧರೆಗೆ ದೊಡ್ಡವರು.

'ಏಲಾ ಪರದೇಶಿ, ಕಬ್ಬಿಣ ಕಛೇರಿಯೊಳಗ ನನ್ನ ಮುದ್ದುಮುಖದ ಕೆಂಪಚಾರಿ ಸೈತವಾಗಿ ಆರು ಮಂದಿ ಗಂಡಮಕ್ಳು ಕಬ್ಬಿಣದ ಕಛೇರಿ ಒಳಗ ಉದ್ಯೋಗ ಮಾಡ್ತೀದ್ದಾರ, ಅವ್ರ ಆರು ಮಂದಿ ಗಂಡಮಕ್ಳ ರಕ್ತ ಕಕ್ಕಾ ಸತ್ರುವಾ, ಈ ಕೆಂಪಚಾರಿ ಕೊಡದಿಲ್ಲಾ

ಮುತ್ತಿನ ಜೋಳ್ಗ ತೆಗ್ದು
ನನ್ನ ಉತ್ತರ ದೇಶದ ಒಡೆಯ
ಕಪ್ಪು ಧೂಳ್ತ ತೆಗೆದರಂತಾ
ಮುದ್ದಿ ಮೇಲಾ ಇಟ್ಟರಂತಾ
ಎರಡು ನೇತ್ರ ಇಂಗೋಯ್ತು
ಬಾಜಿ ಬಸವಣ್ಣಾಚಾರಿಗ
ಎರಡು ಕಾಲು ಸೇದೋಯ್ತು ||ಸಿದ್ಧಯ್ಯ ಸ್ವಾಮಿ ಬನ್ನಿ||

ಕೆಂಪಚಾರಿ ದುಡ ನೋಡಬೇಕುಂತಾ ಮಹಾನುಭಾವ ಕಂಡಾಯ ಹೊತ್ಕಂಡು, ತಂಬೂರಿ ತಕ್ಕಂಡು, ಕಾವಿ ಜೋಳ್ಗ ಕಂಕುಳಗೆ ಹಾಕ್ಕಂಡು ಎಗ್ಗಲಮೂಲತಿಟ್ಟಿಗಾ ಬರ್‍ತ್ತಿದ್ದಾರ, ಎಗ್ಗಲ ಮೂಲತಿಟ್ಟು, ಕಬ್ಬಿಣದ ಕಛೇರಿ, ಕುಲುಮೆ ಗಟ್ಟಿಯೊಳಗ ಚಿನ್ನದ ಕುರ್ಚಿಯೊಳಗ ಕುಂತಿದ್ದಾನ ಕೆಂಪಣ್ಣ. ಆ ಕೆಂಪಣ್ಣನಾದರು_

ಹತ್ತು ಬೆರಳಿಗೂ
ಮುತ್ತಿನ ಉಂಗುರ
ತಾಮ್ರದ ಚಡವಾ
ಕಾಲಲ್ಲಿ ಮೆಟುಕೊಂಡು
ಮುತ್ತಿನ ಮಣಿ ಕವಚ
ಎಡಕ ಬಲಕ ಬಿಟ್ಕಂಡು

ಅವನು ಎತ್ತಾಗ ಹೊಳ್ಳಿದರು
ಸರಿಯೆ ಫಳಫಳಕನೆ ಹೊಳಿತಾನ
ಆ ಕೆಂಪಚಾರಿ ಚಿಲುಮೆಗೆ
ಇಂಪುಳ್ಳ ಗುರು ಹೊರಟರಯ್ಯ ||ಸಿದ್ದಯ್ಯ ಸ್ವಾಮಿ ಬನ್ನಿ||

'ಹೇ, ಕೆಂಪಚಾರಿ' ಎಂದು ಕೂಗಿದ್ದಾರ. ಕೆಂಪಚಾರಿಗೆ ಹತ್ತುಬದ್ತು ಬಲುಕೋಪ. ಚಿನ್ನದ ಕುರ್ಚಿ ಬಿಟ್ಟು ದಡ್ಡಾಬಡ್ಡನ ಇಳ್ದು, 'ಎಂಯ್ ಆರವತ್ತಾರು ಆಳು ಕೆಲಸ ನಿಲ್ಸರಲಾ' 'ಯಾಕಪ್ಪ ಕೆಂಪಣ್ಣಾ' ಅಂದ್ರು. ಯಾವನೋ ಜಂಗಮ ಮನೆಮನೆ ಒಳಗಾ ಮುದ್ದೆ ಇಸ್ಕಂಡು ತಿಂದು ಮಾರಿಗುಡಿಯೊಳಗ ನಿದ್ದೆ ಮಾಡದ ಬಿಟ್ಟು, ಇವೊತ್ತು ನನ್ನ ಕುಲುಮಾ ಮುಂದಾ ನಿತ್ಕಂಡು, ನನ್ನ ಅಣ್ಣಾ ತಮ್ಮ ಬಂಧು ಬಳಗದವರೆಲ್ಲಾ ಕೆಂಪಣ್ಣಾ ಅಂಥಾ ಕರೀತಾರ, ಈ ಹುಚ್ಚು ಮುಂಡಾ ಮಗಾ 'ಕೆಂಪಚಾರಿ' ಅಂಥಾ ಕರೀತನಲ್ಲಾ ಅವ್ ಯಾವ ದೇಶ್ದ ಮುಂಡಾಮಗ್ನ ನೋಡಬೇಕು ಅಂದರಂತೆ

ನಾನೊಬ್ಬ ಗುರುಕಾಣೊ
ನೀನು ನನಗೆ ಶಿಷ್ಯಕಾಣೊ
ಲೋ ನೀನಲ್ಲ ನಾನೇ
ಮೊದಲ ಗುರುಕಾಣೊ ||ಸಿದ್ದಯ್ಯ ಸ್ವಾಮಿ ಬನ್ನಿ||

'ಯಾವ ರೀತಿ ನೀ ನನಗೆ ಗುರುವಾದೆಯಪ್ಪ, ನಾ ನಿನಗೆ ಶಿಷ್ಯನಾದನಪ್ಪ, ಹೇಳು' ಎಂದ್ರು. ತಂಬೂರಿ ತಾನೇ ಯಾರು ಮಾಡಿದ್ರು, ಕಟ್ಟಿರುವ ಲಿಂಗವನ್ನು ಯಾರು ಮಾಡಿದ್ರು. ಜಾಗಟೆ, ಬಿರುದು, ಲಾಂಛಾನ, ಕಂಡಾಯ ಮಾಡಿ ಕೊಟ್ಟವರು ನಾವೇ ತಾನೆ'.

ತಂಬೂರಿ ಮಾಡವ್ರಗೆ
ಎಷ್ಟು ಕಷ್ಟವಾ
ಬಾರಿಸೊನಗೆ ಎಷ್ಟು ಕಷ್ಟವಾ
ತಿಳಿದೇಳು ಎಂದನಂತೆ
ಮೊದಲನೆ ಗುರುವು ನಾನೇ ಕಣೊ
ಎರಡನೆ ಗುರುವು ನೀನು ಕಣೊ ||ಸಿದ್ದಯ್ಯ ಸ್ವಾಮಿ ಬನ್ನಿ||

ಧರೆಗೆ ದೊಡ್ಡವರು ಹೇಳಿದ್ರಂತೆ
ನಾನೊಬ್ಬ ದೇವ್ರು ಕಣೋ
ನೀನೊಬ್ಬ ನರಮನುಷ್ಯ ||ಸಿದ್ದಯ್ಯ ಸ್ವಾಮಿ ಬನ್ನಿ||

'ಹೇ ಜಂಗಮ, ದೇವ್ರು ಶ್ರಿಷ್ಟ ಮಾಡದವರು ನಾವು. ಒಂದು ಕರಿಕಲ್ಲ ತರತ್ತೀವಿ. ಕಾಲಲ್ಲಿ ಮೆಟ್ಟಿಕೊಂಡು ದೊಡ್ಡ ಉಳಿಯ ತಗಂಡು, ಚಿಕ್ಕ ಸುತ್ತಿಗ ತಕ್ಕಂಡು ವಿಗ್ರಹ

ಮಾಡ್ತೀವಿ. ನಾವು ಮಾಡಿದ ವಿಗ್ರಹ ತಕ್ಕಂಡು ಮನೆದೇವ್ರು ಅಂತ ಪೂಜಿಸಿಕೊಂಡು, ಕಾಯಿ ಹೊಡ್ಕು ಹಣ್ಣು ಮುರ್ದು ಕರ್ಪೂರ ಸಾಂಬ್ರಾಣಿ ಲೋಭಾನ ಬೆಳಗಿ ಸನಿಗೆ ವರಕೊಡು ದೇವ್ರು ಅಂತ ಬಿದ್ದು ಬಿದ್ದು ಕೇಳ್ತಿಯಾ'

ದೇವ್ರು ಮಾಡವ್ರಗೆ
ಎಷ್ಟು ಕಷ್ಟ
ಪೂಜೆ ಮಾಡುವ್ರಗೆ
ಎಷ್ಟು ಕಷ್ಟ
ತಿಳಿದು ಹೇಳು ಅಂದಾನಂತೆ
ದೇವದೇವ್ರಗೆಲ್ಲಾ
ನಾವೇ ಮೊದಲ ದೇವ್ರು ಅಂದಾನಂತೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಧರೆಗೆ ದೊಡ್ಡವರು ಹೇಳಿದ್ರು, 'ಅಯ್ಯಾ ಜಡಬಾರಕ್ಕೆ ಗಂಡ, ಅರಶೂನ್ಯಕ್ಕೆ ಒಡೆಯ ಮಾಟ್ನ ಕೊಟ್ಟಿದ ತಂತ್ರಕಣೋ ಮಂಟೇಲಿಂಗಯ್ಯ ಕಣೋ. ನೀ ಯಾವ ರೀತಿಯೊಳಗೆ ಗಂಡನಾದೆ ಮಗನೆ ತಿಳಿದೇಳು ಅಂದ್ರಂತೆ.

ಅಯ್ಯಾ,
ತಾಲೀ ಮಾಡವ್ರು ನಾವೇ
ತಂತಿ ಮಾಡವ್ರು ನಾವೇ
ಗಂಡಗಂಡರಿಗೆಲ್ಲಾ
ಮೊದಲ ಗಂಡ
ನಾವೇ ಕಾಣೋ ||ಸಿದ್ದಯ್ಯ ಸ್ವಾಮಿ ಬನ್ನಿ||

ನಾವು ಮಾಡ್ದ ತಾಲಿ
ನೀ ತಕ್ಕಂಡು ಹೊಯ್ತಿಯೆ
ಕೂಡ್ದ ಕುಲದಲ್ಲಿ
ಸೇರಿದ ಸಭೆಯಲ್ಲಿ
ಸೀತಾಳ ಚಪ್ಪರದಲ್ಲಿ
ಏನಪ್ಪಾ ಕುಲದವರೇ
ಏನಪ್ಪಾ ಮಠದವರೇ
ನನ್ನ ಹೆಂಡ್ತಿಯಾ ಕತ್ತಿಗೆ
ತಾಲಿಯ ಕಟ್ಟುತ್ತಿನೀ
ಅಪ್ಪಣೆಯಾ ಕೊಟ್ಟೀರಯ್ಯ
ಹಾಗಂತಾ ಕೇಳ್ತಿಯಾ

ನಿನ್ನ ಹೆಡ್ತಿ ಕತ್ಗೆ
ತಾಲೀ ಕಟ್ಟು ಅಂತ ಹೇಳ್ತಾರೆ
ನಿನ್ನ ಹೆಂಡ್ತಿ ಕತ್ತಿಗೆ ನೀನು
ತಾಲಿ ಕಟ್ಟುಬುಟ್ಟರೇ
ನಿನ್ನ ಹೆಂಡ್ತಿಗೆ ನೀನು ಗಂಡನಾ
ತಾಲಿ ಮಾಡವನ್ಗೇ ಎಷ್ಟಿದದೊ ಕಷ್ಟ
ಕಟ್ಟು ಬುಡವನಿಗೆ ಕಷ್ಟವೇನೊ
ತಾಲಿ ಮಾಡೋನು ಮೊದಲ್ನೇ ಗಂಡ
ಕಟ್ಟಿದವನು ಎರಡ್ನೇ ಗಂಡಾ
ನಿನ್ನ ಹೆಡ್ತಿಗೆ ನೀನಲ್ಲ ಗಂಡಾ ಕಣೋ
ಮೊದಲ್ನೇ ಗಂಡಾ ನಾನು ಕಾಣೋ ||ಸಿದ್ದಯ್ಯ ಸ್ವಾಮಿ ಬನ್ನಿ||

ಗುರು ಗಂಡದೇವ್ರು ನಾನೇ ಆಗಿರುವಾಗ ನೀ ಯಾವ ಊರ ಪರದೇಶಿ ತಿಳಿದೇಳು ಅದನಂತೆ

ಯಾರಾಲಾ ಪರದೇಸಿ
ಯಾವೂರಲಾ ಜಂಗಮ
ಕಬ್ಬಿಣದ ಕುಲಮೆಲಿ
ನೊಣಕೇನು ಕೆಲಸವಯ್ಯ
ನೀ ಕೇರಿ ಕೇರಿಗೆ ಹೋದರೆ
ನಿಂಗ ರಾಗಿ ಜೋಳ ಕೊಡ್ತಾರೆ

ಅಯ್ಯ ರಾಗಿಗೆ ಬರನಿಲ್ಲಾ
ಜೋಳಕೆ ಬರನಿಲ್ಲ
ಕಲಿಯಬಾರದಿತ್ತು ಭಂಗಿ ಚಟವ
ಬೆಂಕಿ ಕೆಂಡ ಕೊಟ್ಟು ಮಗನೆ
ಮನೆ ದೇವ್ರ ಸೇವೆ ಮಾಡಿಸಪ್ಪಾ

'ನಿನಗೊಂದು ಕೆಂಡ ಕೊಟ್ಟರೆ ನನಗೊಂದು ಉರಿ ಕಡಿಮೆಯಾಗುತ್ತದೆ ಮುಂದಕ್ಕೆ ಹೋಗು' ಅನ್ನುವಾಗ ಮಹಾನುಭಾವ ಧರೆಗೆ ದೊಡ್ಡವರು ಕಬ್ಬಿಣದ ಗಟ್ಟಿಯೊಳಗ ತಮ್ಮ ಜಡೆಯಿಂದ ಎಪ್ಪತ್ತೇಳು ಬೆಂಕಿ ಕೆಂಡ ಸುರಿಸುದ್ರು. ಈಗಾಲಾದರೂ ಬೆಂಕಿ ಕೆಂಡ ಕೊಡಪ್ಪ ಎಂದ್ರು.

ಗ್ವಾಡೆ ಬೆರಣೆಲಿ ಮಡ್ಗಿ ಕೊಡೊ
ಬಾಚಿ ಚಕ್ಕೇಲಿ ಇರಿಸಿ ಕೊಡೊ

ಗ್ಯಾಡೆ ಬೆರಣೆಯ ನಿಮ್ಮಪ್ಪನಮ್ಮ ತಟ್ಟಿ ಮಡಗಿಲ್ಲ
ಬಾಚಿ ಚಕ್ಕೆಯ ನಿಮ್ಮಪ್ಪನಯ್ಯ ಕೆತ್ತಿಲ್ಲ ||ಸಿದ್ದಯ್ಯ ಸ್ವಾಮಿ ಬನ್ನಿ||

'ಬೆಂಕಿ ಕೇಳಿದಲ್ಲೊ ಹಿಡಿಯೊ ನಿನ್ನಂಗಯ್ಯ'ಎಂದು ಸರಕ್ಕನೆ ಮೂಗಿಕ್ಕಳ ಇರಿದರು ಕೆಂಪಣ್ಣನವರು. ದಪ್ಪದೊಂದು ಕೆಂಡ ಇಕ್ಕಳದೊಳಗೆ ಇರಿಸಿಕೊಂಡು 'ಹಿಡಿಯೊ ಪರದೇಶಿ ನಿನ್ನ ಎರಡು ಕೈಯ' ಅಂದನಂತೆ

ಬೆಂಕಿಯ ಕೆಂಡವನ್ನು
ಹಸ್ತದೊಳಗೆ ಹಿಡಿದುಕೊಂಡು
ಎರಡು ನಯನಕೆ ಒತ್ತಿಕೊಂಡು
ಭಂಗಿ ಫಲಾರವನ್ನು ಮಾಡಿಕೊಂಡು ನಮ್ಮ ಗುರುವು
ಕಪ್ಪು ಧೂಳ್ತವ ತೆಗೆದರಂತಾ
ಕೆಂಪಚಾರಿಗೆ ಇಟ್ಟರಾಂತಾ
ಹುಚ್ಚು ಬೆಪ್ಪು ಬಂದಿತಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಇಕ್ಕಿದ ಕವಚನೆಲ್ಲಾ
ಚೂರು ಚೂರು ಮಾಡುತಾನ
ಚಿಂದಿ ಚಿಂದಿ ಮಾಡ್ತನೆ
ಬಂಗಾರ ಕಿರೀಟ
ನೀರಿಗೆ ಇಟ್ಟವನೆ
ವಜ್ರದ ಕವಚವೆಲ್ಲಾ
ಕತ್ತರ್ಸಿ ಕತ್ತರ್ಸಿ ಹಾಕ್ತನೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಹುಟ್ಟಿದ ನಿರ್ವಾಣದಲ್ಲಿ ಕೆಂಪ
ಥೈ ತಕ್ಕನ ಕುಣಿದನಂತಾ
ಕುಣಿತ್ತಿದ್ದ ಕೆಂಪನ
ನೋಡ್ದ ನಮ್ಮಪ್ಪಾ
ಇನ್ನಷ್ಟು ಹುಚ್ಚ
ಕೊಡಬೇಕು ಅಂತೇಳಿ
ಭಂಗಿ ಚಿಲುಮೆ ತೆಗೆದರಂತ
ಒಂದು ಧಂ ಹೊಡೆದು
ಎಡಗಡ ಜೋಲಾಡಿ
ಎರಡು ಧಂ ಹೊಡೆದು
ಬಲಗಡೆ ಜೋಲಾಡಿ

ಬಾಯಲ್ಲಿ ಹೊಗೆ ತುಂಬ್ಕಂಡು
ನಿಂತಿರುವ ಕೆಂಪಣ್ಣನ ಮೊಕ್ಕ
ಉಫ್ಫೋ ಅಂಥಾ ಉರುಬಿದರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||
ಬಿಟ್ಟು ಬಿಟ್ಟ ಹೊಗೆನೆಲ್ಲಾ ಮುದ್ದು ಮುಖದ ಕೆಂಪಣ್ಣಾ ಗೊಟ್ಕಗೊಟ್ಕನೇ ನುಂಗಿದನಂತಾ
ಹುಚ್ಚು ನೀಲಿ ಬೆಪ್ಪು ನೀಲಿ
ಆನಂದದ ನೀಲಿ
ಔತಣದ ನೀಲಿ
ಮಣ್ಣು ತಿನ್ನುವ ನೀಲಿ
ಕಲ್ಲುಕರಗುವ ನೀಲಿ
ಹುಸಿ ಸಿದ್ದನ ನೀಲಿ
ರೋಣಿ ಸಿದ್ದನ ನೀಲಿ
ಗಳಗ ಸಿದ್ದನ ನೀಲಿ
ಒಂದಲ್ಲ ಎರಡಲ್ಲ
ಎಂಭತ್ತೆಂಟು ನೀಲಿ ಅವನ
ಹೊಟ್ಟೆ ಒಳಗ ಓಡಾಡಿತಂತಾ

ಯಾವಾಗ ಎಂಭತ್ತೆಂಟು ನೀಲಿ ಹೊಟ್ಕವೊಳಗ ಓಡಾಡಿ, ಗುಡುಗುಡುಂತಾ ಗುಡುಗಿ, ಬರ್‌ಸಿಳ್ಳಾಗಿ ಒಡ್ಡು ಬಿಡ್ತು. ನೀಲಿ ಬಂದ ಗ್ಯಾನದಲ್ಲಿ ಮುದ್ದು ಮುಖದ ಕೆಂಪಣ್ಣಾ.

ಕಂಡಕಂಡವರಿಗೆಲ್ಲಾ ಕೆಂಪ
ಕಲ್ಲನಾದರು ಹೊಡೆದನಂತಾ
ಹಳ್ಳಕಾಯಿ ಕಂಡಾರೆ
ಕಟ್ಕನೆ ಕಡಿದವನೆ
ಎಕ್ಕದ ಹಾಲ ಕಂಡರೆ
ಪಕ್ಕನ ಬಾಯ ಬಿಟ್ಕನಂತಾ
ಮುಗಂಡುಗ ಸುಣ್ಣದ ತಿಳಿ
ಮೂಗಲ್ಲಾದರೂ ಎಳೆದನಂತೆ
ಅರವತ್ತಾರು ಆಳನ್ನೆಲ್ಲಾ ಕೆಂಪಾ
ಒಬ್ನ ಮೇಲೆ ಒಬ್ನ ಎತ್ತ್ ಹಾಕ್ಕಂಡು
ಬತ್ತ ಬಡಿಯಾಂಗ ಬಡಿದನಂತಾ

ಆಗ ಅರವತ್ತಾರ್ ಆಳ ಬಂದು ಅಪ್ಪಾಜಿಯವರ ಪಾದಕ್ಕಾ ಸಾಷ್ಟಾಂಗ ನಮಸ್ಕಾರ ಮಾಡಿ. 'ಬುದ್ಧಿ, ಶ್ರೀರಂಗಪಟ್ನದರಂಗಸ್ವಾಮಿಗ ದಾಸೋಹ ಆಗಬೇಕುಂತಾ ಚಿನ್ನದ ತೊಲಗೇದು, ಗರುಡುಗಂಬ ನಿಲ್ಲವರಗೂ ನಾವು ಕವಡಕಾಸ್ ಕೊಡಾದಿಲ್ಲಾ ಅಂದಾ.

ಬಿಟ್ಟೆ ಜೀತ ಗೇಯ್ತ್ತಾ ಇದ್ದೀವಿ ಪ್ರಭು' ಅಂದ್ರು. ಧರೆಗೆ ದೊಡ್ಡವರು ಹೇಳಿದ್ರು 'ಕಂದಾ ಬೆಳ್ಳಿ ಮೂಡಿ ಬೆಳಕರಿಯೋ ಹೊತ್ತ್ಗಗ ಮಾರಳ್ಳಿ, ಹಾಳ್ ಮಾಡಿ ಮಳವಳ್ಳಿ ಉದ್ಧಾರ ಮಾಡ್ತೀನಿ. ಅರವತ್ತಾರು ಆಳು ಮಳವಳ್ಳಿಗೋಗಿ' ಅಂದ್ರು. ಅರವತ್ತಾರು ಆಳು ಮಳವಳ್ಳಿ ಗ್ರಾಮಕ್ಕೆ ಹೊರಟಿದ್ದಾರ. ಕುಲುಮೆ ಗಟ್ಟೆಯೊಳಗ ಕೆಂಪಚಾರಿ ಲಕ್ಷಿಕನ ಮಗನಾಗಿದ್ರು ಇಂದು ಕಟ್ಟಕಳಕಾ ಒಂದು ಕಚ್ಚೆಪಾವ್ನ ಇಲ್ದೆ ತನ್ನ ಮಾನವಾ ತಾನೇ ಮುಚ್ಚಕ್ಕೊಮು ಅಂದ್ರಾ ಮಗನ್ನ ಬಟ್ಟ್ಯಾಪಾಡ ಗತಿಯಿಲ್ಲ. ಹುಟ್ಟು ನಿರ್ವಾಣದಲ್ಲಿ ಕುಣಿತಿದ್ದ, ಧರೆಗೆ ದೊಡ್ಡವರು ಮುಂದಗಡೆ ಕೆಂಪಣ್ಣಾ ಹಿಂದುಗಡೆ ಕುಂದೂರು ಬೆಟ್ಟಕ್ಕೆ ಬಂದಿದ್ದಾರೆ. ಕೆಂಪಣ್ಣನ ಮುಂಗ್ಯೆ ಇಡಿದುಕೊಂಡು ಕತ್ತಿನ ಮೇಲೆ ಮೂರು ಗುದ್ದು ಗುದ್ದಿ ಕಾಳಿಂಗನ ಗವಿಯೊಳಗ ಸೆರೆ ಮುಡಗುಬುಟ್ಟು ಬಾರಿ ಗುಂಡನ್ನು ಬಾಗಿಲಿಗೆ ಚಾಚಿ ಸಾಸನ ಬರೆದಿದ್ದಾರೆ. 'ಕೆಂಪಣ್ಣಾ ಇವತ್ತು ನಿನಗ ನಾ ಗುಂಡ ಚಾಚಿದ್ದೀನಿ ನಾಳೆ ಕಲಿ ಉದ್ಭವವಾಗುವಾಗ ಕಲಿಯನ್ನು ನೋಡಲಾರದೆ ನರಮಾನವರ ಕಣ್ಣಿಗೆ ಕಾಣದೆ ನಾ ಮರ್ತ್ಯ ಲೋಕಕ್ಕೆ ಮರೆಯಾಗಿ ಹೋಗುವಾಗ ಬೊಪ್ಪೇಗೌಡನ ದೊಡ್ಡಿಯೊಳಗ, ಇಲ್ಲಿ ನಿನಗೆ ಚಾಚಿದ ಗುಂಡ ನನಗೆ ಚಾಚು ಅಂದರಂತೆ.

ಛೆ! ಇವತ್ತು ಮಾರಳ್ಳಿ ಮನಸ್ಥಾನಕ್ಕೆ ಮಗನ ತರೊಕೆ ಹೋಗಿ ಮಾರಳ್ಳಿ ದುಂಬುಧೂಳು ನನ್ನ ಮಂಡಾ ಕೌಸ್ಕಂಡಿದ್ದಾದ. ಇವೊತ್ತು ಸಕ್ಕಂ ಸಮರಾತ್ರಿಯೊಳಗಾ ಭಗಿರಾಜನ ಪುತ್ರಿ ಜಾಲಾರಾ ಗಂಗಾದೇವಿ ನಿದ್ದಾ ಮಾಡ ಟೈಮನಲ್ಲಿ.

ಕುಕ್ಕೂರು ತಲಕಾಡು
ಮಾಲಂಗಿ ಮಡವಿಗಾ
ಸ್ನಾನಕ್ಕೆ ಹೋಗಬೇಕು
ಮಡಿವಾಳ ಮಾಚಯ್ಯನ
ಸ್ವಲ್ಪ ನೋಡಬೇಕು ಅಂದರಯ್ಯ ||ಸಿದ್ದಯ್ಯ ಸ್ವಾಮಿ ಬನ್ನಿ||

೮

# ಮಡಿವಾಳ ಮಾಚಯ್ಯ*ನ ಸಾಲು

ಯಾವಾಗ ಬೊಪ್ಪಗೌಡನಹಟ್ಟಿಗಾ ಬರುವಂತಾ ಗುರುದೇವರ್ನ ದೊಡ್ಡಮ್ಮ ನೋಡಿದ್ರು, 'ಶರಣಾರ್ಥಿ ನಮ್ಮಪ್ಪಾಜಿ, ಮಾರಳ್ಳಿಗೋಗಿ ಮಗನ ತತ್ತ್ರೀನಿ ಅಂಥಾ ಹೇಳಿದ್ರಲ್ಲಾ ಇವೊತ್ತು ಒಬ್ಬರೇ ಬಂದಿರಕಾ ಕಾರಣವೇನು' ಅಂಥಾ ಕೇಳ್ದ. 'ದೊಡ್ಡಮ್ಮ, ಏಳುವರ್ಷದ ಮಗನಗಾ ನಾ ಹುಚ್ಚು ಕೊಟ್ಟಿದ್ದೀನಿ ಇನ್ನು ಹನ್ನೆರಡು ವರ್ಷಗಂಟ ಅನ್ನ ನೀರು ಒಂದ್‌ಚೂರು ಇಲ್ಲ. ಏಳುಬಾಯಿ ಹೊನ್ನುತ್ತ ಎಲಕುಂದೂರು ಬೆಟ್ಟ ಕಾಳಿಂಗನ ಕಲ್ಲಗವಿಗಾ ಎಸ್ದಿದ್ದೀನಿ. ನಾನಿವತ್ತು ಕುಕ್ಕೂರು, ತಲಕಾಡ ಮಾಲಂಗಿ ಮಡುಗಾ ಸ್ನಾನಕ್ಕೆ ಹೋಗಬೇಕು.' ದೊಡ್ಡಮ್ಮ ತಾಯಿ ಹೇಳಿದ್ರು 'ಅಪ್ಪಾಜಿ ಜಗತ್ತದಲ್ಲೇ ಒಬ್ಬ ದೇವರಗುಡ್ಡ ಒಂದೊತ್ತು ಇರಾದೆ ಕಷ್ಟ. ಹನ್ನೆರಡು ವರ್ಷಗಂಟಾ ಅನ್ನ ನೀರು ಇಲ್ಲದ ಕಾಳಿಂಗನ ಕಲ್ಲ ಗವಿಗಾ ಎಸ್ದಿನಿ ಅಂತಾ ಹೇಳಿದರೆಲ್ಲಾ, ಅವ ಸತ್ತು ಹೋಗ್ದೆ ಜೀವ್ ಸೈತ ಉಳಿದಾನ ಬುದ್ಧಿ' ಅಂದ್ರು. ಧರೆಗೆ ದೊಡ್ಡವರು ಹೇಳಿದ್ರು; 'ದೊಡ್ಡಮ್ಮ, ನಾನು ಮಾಲಿಂಗನ ಮಡುವಿನಲ್ಲಿ ಸ್ನಾನ ಮಾಡ್ಕ ಬರಾಗಂಟಾ, ಸೂಲ ಇಟ್ಕಂಡಿರು ಖಂಡಿತವಾಗಿ ಸಾಯಲ್ಲಾ, ಅವನ್ನ ನರಗ್ಯಾನ ಬಿಡ್ಸಬೇಕು ಋಷಿಗ್ಯಾನ ಬರ್ಸಬೇಕು, ದುರುಳು ಬುದ್ಧಿ ಹೋಗಿ ಅವ್ನ ಗುರುಬುದ್ಧಿ ಬಂದು. ಗುಡ್ಡ ಗುಡ್ಡರಿಗೆಲ್ಲಾ ಸಿದ್ದಪ್ಪಾಜಿ ಮಾಡ್ಬೇಕು'. ಈವಾಗ ದೊಡ್ಡಮ್ಮ

ಮಡಿವಾಳ ಮಾಚಯ್ಯನ
ಇಲ್ಲಿ ಬರಮಾಡವ್ವ
ಬಣ್ಣಿ ಕುರುಡೆ
ಅಪ್ಪಲ್ಲಾಡಿದ ಮಾತಾ
ದೊಡ್ಡಮ್ಮ ಕೇಳ್ಕಂಡು
ಹೊಂಗ ತೋಪಿಗಾ ತಾಯಿ
ಬೊಳ್ಳುಬೊಳ್ಳನ ಬಂದಳಂತೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಬರುವಂತ ದೊಡ್ಡಮ್ಮತಾಯ ಹೊಂಗತೋಪಿನೊಳಗಿರೋ ಮಡಿವಾಳಮಾಚಯ್ಯನವರು ಹೇಳಿದ್ರು; 'ಇಷ್ಟು ದೂರ ದಯ ಬಂದದೇನು ಮಾತಾಯಿ' ಅಂಥಾ ಕೇಳ್ದ 'ಅಪ್ಪಾಜಿಯವರ ಅಜ್ಞೆ ಆಗಿದೆ ದಯಮಾಡು ನನಕಂದಾ' ಅಂದ್ರು.

ದೊಡ್ಡಮ್ಮಾಡಿದ ಮಾತು
ಮಾಚದೇವರು ಕೇಳ್ಕಂಡು
ಮುಂಚರಿ ದೊಡ್ಡಮ್ಮ
ಹಿಂಚರಿ ಮಾಚಯ್ಯ
ಬೊಪ್ಪಗೌಡನ ಪಟ್ಟಗಾ
ಒಪ್ಪದಲ್ಲಿ ದಯವಾದರಂಯ್ಯ ||ಸಿದ್ದಯ್ಯ ಸ್ವಾಮಿ ಬನ್ನಿ||

ಮಡಿವಾಳ ಮಾಚಯ್ಯ 'ಶರಣಾರ್ಥಿ ಧರೆಗೆ ದೊಡ್ಡಯ್ಯ', ಅಂದ್ರು. 'ಶರಣಾಗಲಿ ನನಕಂದಾ' 'ನನ್ನ ಕರ್ದ ಕಾರಣವೇನು ಬುದ್ಧಿ' ಅಂಥಾ ಕೇಳ್ದ 'ಕಂದಾ, ಇವೊತ್ತು ನಾ ಕಾವಿ ಮಡಿ ಮಾಡ್ಬೇಕು. ಕಾವಿ ಮಡಿ ಮಾಡ್‌ಕೊಡ್ತೀಯಪ್ಪಾ' ಅಂದ್ರು. 'ಖಂಡಿತವಾಗಿ ಕಾವಿ ಮಡಿ ಮಾಡ್ ಕೊಡ್ತೀನಿ ಮಾಬುದ್ಧಿ' ಅಂದಾ. 'ಮಾಚಯ್ಯ, ನಾಲಗಲಿ ನುಡಿಬೌದು ನುಡಿದಂತಾ ನಡಕಳಾದು ಬಳಾ ಕಷ್ಟ, ನನಕಂದಾ'.

ಪ್ರಾಣ ಹೋದರು ಸರಿಯೇ
ಜೀವ ಹೋದರು ಸರಿಯೇ
ಖಂಡಿತವಾಗಿ ತಂದೆ ನಿಮ್ಮ
ಕಾವಿ ಮಡಿ ಮಾಡುತೀನಿ ||ಸಿದ್ದಯ್ಯ ಸ್ವಾಮಿ ಬನ್ನಿ||

'ಶಭಾಸ್ ನನಕಂದಾ, ಮಾತಿಗ ತಪ್ಪದ್ರಾ ಏನ್ ಮಾಡ್ಲಿ' ಅಂದ್ರು. 'ಶಾಪ ಕೊಟ್ಟ ಬಿಡಿ ಬುದ್ಧಿ' ಅಂದಾ. 'ಹಾಗಾದ್ರ, ನಾ ಕಾವಿಮಡಿ ಮಾಡ್ ಬೇಕಾದ್ರ, ಭಗಿರಾಜನ ಪುತ್ರಿ ಜಾಲಾರಾ ಗಂಗಾದೇವಿ ನಿದ್ದಾ ಮಾಡೊ ಟೇಮು ಸಟ್ಟಂ ಸಮರಾತ್ರಿಂಯೊಳಗಾ ಕಾವಿ ಮಡಿಗೋಗ್ ಬೇಕಾದ್ರ'

ಅಕ್ಕಿಪಕ್ಷಿ ಸದ್ದು
ತಾಗಕ್ಕಿಲ್ಲಾ ಮಗನೇ
ನರ ಉಳಿನ ಶಬ್ದ
ಕರಣಕಾ ಬೀಳಾಕಿಲ್ಲ
ಪಂಜಿನ ಬೆಳಕು
ಕಣ್ಣಿಗ ಕಾಣಾಕಿಲ್ಲಾ
ನೀನೆ ಪೆಂಚ್ ಹಿಡಿಬೇಕು
ನೀನೇ ಮಡಿ ಬುಡಬೇಕು
ಮಡಿ ಎತ್ಕಳಬೇಕು
ಕುಕ್ಕೂರು ತಲಕಾಡು
ಮಾಲಂಗಿ ಮಡುನಲ್ಲಿ
ಕಳಕೊಟ್ಟ ಕಾವಿಬಟ್ಟೆ

ನೀರ್ಗಾಜಾಕಿಲ್ಲಾ
ಕಲ್ಲನ ಮೇಲಾ
ಎತ್ತಿ ಬಡಿಯಕಿಲ್ಲಾ
ಮುಸ್ಸಿ ಹಿಂಡಾಕಿಲ್ಲಾ
ಮುಳ್ಳನ ಮೇಲಾ
ಒಣೆಯಾಕಕಿಲ್ಲಾ
ನನ್ನ ಕಾವಿಬಟ್ಟೆಯೊಳ್ಗ
ಒಂದ್ ಕೋಟಿ ಹೇನು
ಒಂದ್ ಕೋಟಿ ಕೂರ
ಅಲ್ಲಿರಾ ಕೂರ ಹೇನು
ಒಂದಾದರು ಸಾಯಕಿಲ್ಲಾ ॥ಸಿದ್ದಯ್ಯ ಸ್ವಾಮಿ ಬನ್ನಿ॥

ಮಡಿವಾಳಶೆಟ್ಟಿ ಹೇಳ್ದ 'ಸ್ವಾಮಿ, ಐದು ಜನ ಮಾಡ ಕೆಲ್ಸವಾ ಒಬ್ಬನಗಾ ನೇಮ್ಸತಿದ್ದಾರಲ್ಲಾ ಆದ್ರ ನಿಮ್ಮ ಮಾತಾ ನಾ ಕಳ್‌ಕಳಾಕು ಇಲ್ಲಾ ಉಳ್‌ಕಳಾಕು ಇಲ್ಲಾ. ನಿಮ್ಮ ಮಾತನಂತಾ ನಾ ಮಾತ್ ಕೊಟ್ಟ, ಬಿಟ್ಟುಬುಟ್ರಾ ತಪ್ಪಾಯ್ತದಾ ಕೈ ಹಿಡ್ದ ಹೆಡ್ತಿ ಒಂದು ಮತಾ ಕೇಳ್ಕಬತ್ತಿನಿಪ್ಪಾ ಮಾಯಕಾರ

ಮಡಿವಾಳ ಮಾಚಪ್ಪ
ಮಲ್ಲಿಗಾ ಮಾದೇವಿ ದಂಡಕ
ಓಡೋಡಿ ಬಂದನಂತಾ ॥ಸಿದ್ದಯ್ಯ ಸ್ವಾಮಿ ಬನ್ನಿ॥

ಮುಟ್ಟುತಟ್ಟಿನ ಬಟ್ಟೆಯತ್ಕಂಡು. ಹುಬ್ಬ ಸುಡುತ್ತಿದ್ಯಾಂತಾ ಮಲ್ಲಿಗಾ ಮಾದೇವಿ. ಪತಿದೇವರ ಮೊಖ ನೋಡಿ ಹುಬ್ಬ ಸುತ್ತಾದ ನಿಲ್ಸಿದ್ದಾಳ. 'ಎಂದು ನೋಡಿದ್ರು ಚಂದ್ರನ ಕಳ ಇದ್ದಾ ನಿಮ್ಮ ಮೊಖ ಬ್ಯಾಸ್ಗ ಬಿಸಿಲ್ಗ ಮಲ್ಲಿಗ ಹೂವು ಕಂದಿರ ಹಾಗೆ ಕಂದಿರಲು ಕಾರಣವೇನು ಪ್ರಭು' ಅಂದ್ಳು. 'ಮಡದಿ, ಮಹಾನುಭಾವ ಧರೆಗೆ ದೊಡ್ಡವರು ಕಾವಿಮಡಿ ಮಾಡ್ಸೇಕಂತಾ.' 'ಮಾಡ್‌ಕೊಡಿ ಮಾ ಪ್ರಭು' ಅಂದ್ಳು. 'ಕಾವಿ ಮಡಿ ಅಂದ್ರ ಅಷ್ಟು ಸುಲಬವಲ್ಲ ಮಡದಿ, ನಾನೇ ಪೆಂಚ್ ಹಿಡಿಬೇಕು ನಾನೇ ಮಡಿ ಬಿಡಬೇಕು, ಮಡಿನೂ ಎತ್ಕಬೇಕು. ಮೇಲ್ ಚಪ್ಪರನೂ ಹಿಡ್ಕಬೇಕು. ಕುಕ್ಕೂರು ತಲಕಾಡು ಮಾಲಂಗಿ ಮಡಿನಲ್ಲಿ ಸ್ನಾನಮಾಡುವಾಗ ಕಳಕೊಟ್ಟ, ಕಾವಿಬಟ್ಟ, ನೀರಗ ಅಜ್ಜಾಕಿಲ್ಲಾ. ಕಲ್ಲನ ಮೇಲಾ ಬಡಿಯಾಕಿಲ್ಲಾ, ಮುಸ್ಸಿ, ಹಿಂಡಾಕಿಲ್ಲಾ ಒಂದ್ ಕೋಟಿ ಕೂರ ಒಂದ್ ಕೋಟಿ ಹೇನು, ಅವ್ರ ಕಾವಿ ಬಟ್ಟೆಯಲ್ಲಿ ಇದ್ದದಂತಾ. ಅಲ್ಲಿರ ಕೂರ ಹೇನು ಒಂದು ಸಾಯಕಿಲ್ಲಾವಂತಾ' ಮಾಚಯ್ಯ ಆಡಿದ ಮಾತ್ ಕೇಳಿ ಮಲ್ಲಿಗ ಮಾದೇವಿ. 'ಸ್ವಾಮಿ ಸತಿಗ ಬಂದ್ ಕಷ್ಟ ಪತಿಗುಂಟು, ಪತಿಗ ಬಂದ ಕಷ್ಟಾ ಸತಿಗುಂಟು ಹೆಂಡ್ತಿ ಅನ್ನ ಮಮಕಾರವನ್ನು ಬಿಟ್ಟಬಿಡಿ

ಆವೊತ್ತು ಮಗನ ಕೊಯ್ಸು ಭಂಗಿ ಮಾಂಸ್ಯ ಮಾಡ್ಯಕಂಡು ಕಷ್ಟ ಕೊಟ್ಟು ಚಂದ್ರಶಾಲ ಪಡಕಂಡಾ ಮಾನುಭಾವನಲ್ಲವಾ.

ನನ್ನನೇ ಕೊಂಯ್ ಕಳಿಪ್ಪಾ
ಈ ತಲಾವಾಟ ತಕ್ಕಳ್ಳಪ್ಪಾ
ನನ್ನನೇ ಕೊದು
ತಲವಾಟ ತಕ್ಕಳ್ಳಿ
ಬಾನಿಯ ಮಾಡ್ಕಳ್ಳಿ
ಬಾನಿಗೆ ರಕ್ತವಾ ಬಿಟ್ಕಂಡು
ಮಿದುಳನಾದರೂ ತಕ್ಕಂಡು
ನೀಲ ರವ ಮಾಡಿರಪ್ಪಾ
ಎರಡು ನೇತ್ರ ಕಿತ್ತು
ಕಾಳಣ್ಣಾ ಕೆಂಚಣ್ಣಾ
ಎರಡು ಪೆಂಜು ಮಾಡ್ಕಂಡು
ನನ್ನ ಅಂಗೈನಸ್ತ ತರ್ಕಳಿಪ್ಪಾ
ಇಸ್ತ್ರಿಪೆಟ್ಟಿ ಮಾಡಿರಪ್ಪಾ
ಬೆನ್ನನೇ ತರ್ಕಂಡು
ಪಚ್ಚಾಕಲ್ಲ ಮಾಡ್ಕಂಡು
ಇಮ್ಮಡಿ ನರವ ಕಿತ್ತು
ತಂತಿಯ ಮಾಡ್ಕಂಡು
ಮಾಗುರುವಿನಾ ಪಾದಕ್ಕ
ನೀವು ಕಾವಿ ಮಡಿ ಮಾಡಿರಪ್ಪಾ ॥ಸಿದ್ದಯ್ಯ ಸ್ವಾಮಿ ಬನ್ನಿ॥

'ಮಡಿವಾಳಶೆಟ್ಟಿ ಹೇಳ್ದ: 'ಋಷಿ ಸೇರಕಿಂತ ವಿಷ ಕುಡ್ಕಂಡು ಪ್ರಾಣ ಬಿಟ್ಟುಬಿಡಬೌದು, ಕಾವಿ ಬಟ್ಟೆಯವರ ಸಂಗ ನಮಗ ಸರಿಯಿಲ್ಲಾ. ಜಗತ್ತದಲ್ಲಿ ಸ್ತ್ರೀ ಹತ್ಯೆ, ಸಿಸುಹತ್ಯೆ, ಗೋಹತ್ಯೆ, ಮೂರು ದೊಡ್ಡದು ಅಂಥಾ ಹೇಳಿದ್ದರಾ ದೊಡ್ಡವರು' ಇಂಥ ಸ್ತ್ರೀ ಹತ್ಯೆ ಪಾಪಕ್ಕ ನನ್ನ ಗುರಿ ಮಾಡಿದ್ಯಪ್ಪಾ ಮಾಯಕಾರ

ಸ್ನಾನ ಮಡಿಯ ಮಾಡಿ
ಮಡಿವಾಳ ಮಾಚಪ್ಪಾ
ಸಣ್ಣಾ ಮಡಿ ಉಟ್ಕಂಡು ॥ಸಿದ್ದಯ್ಯ ಸ್ವಾಮಿ ಬನ್ನಿ॥

'ಶರಣಾರ್ಥಿ ನಮ್ಮಪ್ಪಾಜಿ' 'ನಿನಗ ಶರಣಾಗಲಿ ನನಕಂದಾ' 'ಇವೊತ್ತು ದಯಮಾಡಿ ಮಾಪ್ರಭು ಮಾಲಂಗಿ ಮಡುವಿನಲ್ಲಿ ಕಾವಿ ಮಡಿ ಮಾಡ್ತೀನಿ' ಅಂದಾ. ಆವಾಗ ನಮ್ಮಪ್ಪಾಜಿಯವರು ಬೊಪ್ಪೇಗೌಡನ ದೊಡ್ಡಿಯನ್ನು ಬಿಟ್ಟು

ಅಷ್ಟಕೊಳಗ ಕಂದಾ
ಅಷ್ಟಾಂಗ ತ್ರಿಶೂಲ
ತ್ರಾಮದ ಮೈಚ್ಛಾಲ
ಹೆಗಲ ಮೇಲ ಜೌಳ
ಕೊರಳ ತುಂಬಾ ರುದರಾಕ್ಷಿ
ಗಂಡುಗತ್ರಿ ಪವಾಡ
ಶಿರದ ಮೇಲಾ ಹೊತ್ಕಂಡು
ಮಂಟಪದ ಕಂಡಾಯ
ಹೆಗಲಮೇಲಾ ಹೊತ್ಕಂಡು
ನವಿಲುಗರಿ ಗೊಂತಾ
ಉರಿಸಿಂಗಿ ಕೊರಾಡ
ಬೆನ್ನ ಮೇಲ ಕಟ್ಕಂಡು
ಮುತ್ತಿನ ಜೋಳ್ಗ ತೆಗೆದು
ಅಪ್ಪಾ ಪರಂಜ್ಯೋತಿ
ಮುಂಗ್ಯೆಗಾಧರ ಮಾಡಿ
ಏಳುಗಿಣ್ಣಿನ ಬೆತ್ತ
ಬಲದ ಕೈಲಿ ಹಿಡಕಂಡು
ತಂಬೂರಿ ತೆಗೆದವರಾ
ಎದೆಯ ಮೇಲೆ ಧರಿಸವರೆ
ಕಂಡಾಯ ತೆಗ್ದು
ಹೆಗೆಲ ಮೇಲ ಹೊತ್ಕಂಡು
ಮಂಡಾ ಉರಿಯ ತೆಗೆದರಂತಾ
ಮಂಡಿಗಾ ಗೆಂಡಾ ಕಟ್ಟಿದರಯ್ಯ
ಎಡದ ಒನ್ನ ಪಾದಕ್ಕ
ಕಬ್ಬಿಣದ ಎಲವಾರಿ
ಬಲದ ಒನ್ನ ಪಾದಕ್ಕ
ಬಸವನ ಪವಾಡ
ಎರಡು ಒನ್ನ ಪಾದಕ್ಕ
ಮುಳ್ಳಿನ ಪವಾಡ
ಹಿಂದಲ ಪಾದವ ತೆಗೆದು
ಮುಂದಕ್ಕ ಮಡಿಗವರ

ಉಗ್ರಾಣವ ಕಡೆದರಂತಾ
ಝುಲ್ಕಝುಲ್ಕನೇ ಬಂದರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಯಾವಾಗ ಉಗ್ರಾಣದ ಮನೆಯನ್ನು ಬಿಟ್ಟು ಮಾಪ್ರಭುಗಳು ಝುಲ್ಕ ಝುಲ್ಕನೇ ಬಂದಿದ್ದಾರ ಮುಂಚರಿ ಮಡಿವಾಳಶೆಟ್ಟಿ ಹಿಂಚರಿ ಮಾ ಗುರುವು

ಬೊಪ್ಪಗೌಡನ ಹಟ್ಟಿ
ಪ್ರೇಮದಲ್ಲಿ ಬಿಟ್ಟವರೆ
ಯಾವ್ ಮಾರ್ಗವಾಗಿ
ಗುರುದೇವ ಬತ್ತವರೆ
ಹೊಂಗತೋಪ ಕಡ್ದು
ರಾವಣಾಸುರನ ಬೆಟ್ಟ
ಎಡಗಡೆ ಬಿಟ್ಕಂಡು
ಬಸವನ ಬೆಟ್ಟ
ಹೊರಗಡೆ ಬಿಟ್ಕಂಡು
ಕುಕ್ಕೂರು ತಲಕಾಡ
ಪ್ರೇಮದಲ್ಲಿ ಕಡ್ದವರೆ
ಮಾಲಂಗಿ ಮಡುವಿಗಾ
ನನ್ನ ಮಾಯಕಾರ ಹೊರಟರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಮಾಲಂಗಿ ಮಡುವಿನಲ್ಲಿ ನಿಂತ್ಕಂಡ್ರು. ಅದು ಸಿದ್ದರಾಣ್ಯ ಕ್ಷೇತ್ರ. ಆ ಸಿದ್ದರಾಣ್ಯ ಕ್ಷೇತ್ರದಲ್ಲಿ ಪಕ್ಕದಲ್ಲಿ ಏನಂತಾ ಸಾರಿದ್ರು. 'ಮಾಲಂಗಿ ಮಡುವಾಗಲಿ. ತಲಾ ಕಾಡ ಎಂಬ ಇಬ್ಬರು ಶರಣರು ಮುಕ್ತಿಯಾದದಕಾ ಇದಕ್ಕಾ 'ತಲಕಾಡು' ಅಂತಾ ಹೆಸರಾಗಲಿ'

ಮಾಲಂಗಿ ಮಡುವಾಗಲೆಪ್ಪಾ
ತಲಕಾಡು ಮಳ್ಳಾಗಲೆಪ್ಪಾ ||ಸಿದ್ದಯ್ಯ ಸ್ವಾಮಿ ಬನ್ನಿ||

ನಮ್ಮಪ್ಪಾಜಿ, ತುಂಬಿದಾ ಸೋಮಾರ ದಿವ್ಸ ಏಕಾಂಗಿ ವಸ್ತು ಧರೆಗೆ ದೊಡ್ಡಯ್ಯ. ಬಿರುದು ಬಿಂಕನ್ನು ಕಳೆದು ಮಡಿವಾಳ ಮಾಚಯ್ಯನ ಕೈಲಿ ಕೊಟ್ಟಿದ್ದಾರ. 'ನಾನು ಮಾಲಿಂಗನ ಮಡುವಲ್ಲಿ ಸ್ನಾನ ಮಾಡಗಂಟಾ ಈ ಕಾವಿ ಬಟ್ಟೆ ಮಡಿ ಮಾಡು ಕಂದಾ' ಅಂದ್ರು. ಮಡಿವಾಳಶೆಟ್ಟಿ ಎರಡು ಕಣ್ಣಲ್ಲಿ ನೀರು ತುಂಬ್ಕಂಡು

ಚಂದ್ರಾಯುಧ ಹಿಡ್ಕಂಡು
ಮಡದಿ ಮುಂದಲಾ ಹಿಡದನಂತಾ
ಒಂದು ಏಟ ಹೊಡದನಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಯಾವಾಗ ಮಡದಿ ಮುಂದಲೆ ಹಿಡ್ಕು ಒಂದೇಟು ಹೊಡದು, ಎರಡು ತುಂಡು ಮಾಡಿದ್ವಾನ. ತಲವಾಟಿಯನ್ನು ತೆಗೆದು ಮಡಿವಾಳ ಮಾಚಪ್ಪಾ, ಬಾಂಡ್ಲಿ, ಮಾಡ್ಕಂಡು ಬಾಂಡ್ಲಿಲೇ ರಕ್ತ ಬಸ್ಕಿದ್ವಾನ. ಬಿದ್ಕ, ತಕ್ಕಂಡು ನೀಲಿರವ ಮಾಡಿ, ಎರಡು ನೇತ್ರವನ್ನು ಕಿತ್ಕಂಡು ಕಾಳಣ್ಣ-ಕೆಂಚಣ್ಣ ಎರಡು ಪೆಂಜು ಮಾಡಿದ್ವಾನ. ಕೆಂಚಣ್ಣನ ಪಂಜ್ನ ಎಡದ ಕಾಲಿನ ಹೆಬ್ಬರಳಿಗ ಕಟ್ಕಂಡ, ಕಾಳಣ್ಣನ ಪಂಜ್ನ ಬಲದ ಕಾಲಿನ ಹೆಬ್ಬರಳಿಗ ಕಟ್ಕಂಡಾ

ಅಂಗ್ಯೆನಸ್ತ ತರ್ದು
ಇಸ್ತ್ರಿಪೆಟ್ಟಿ ಮಾಡ್ಕಂಡು
ಬೆನ್ನನೇ ತರ್ಕಂಡು
ಪಚ್ಚೆಕಲ್ಲ ಮಾಡ್ಕಂಡು
ಮಡದಿ ಹಿಮ್ಮಡಿ ನರವ ಕಿತ್ತು
ತಂತಿಯ ಮಾಡ್ಕಂಡು
ಕಾವಿ ಮಡಿ ಮಾಡುತಾನ ॥ಸಿದ್ದಯ್ಯ ಸ್ವಾಮಿ ಬನ್ನಿ॥

ಹುಟ್ಟಿದ ಗಂಗಾ ಒಳಗಾ
ಹುಟ್ಟ ಬಾರದ ಪುಷ್ಪ
ಆಳುದ್ದ ಗಂಗಾ ಒಳಗಾ
ಏಳ ಬಾರದ ಪುಷ್ಪ
ಮೂರು ಮುಳಗ ಮುಳಗಿದರಂತಾ
ಮೇಲಕ್ಕಾದರು ಎದ್ದರಂತಾ ॥ಸಿದ್ದಯ್ಯ ಸ್ವಾಮಿ ಬನ್ನಿ॥

ಮೂರು ಮುಳ್ಗ ಮುಳಗವರೆ
ಮೇಲ್ಕ ಎದ್ದವರೆ
ಆತ್ಮಲಿಂಗ ತೆಗದರಂತಾ
ಜ್ಯೋತಿಲಿಂಗಯ್ಯನವರು ॥ಸಿದ್ದಯ್ಯ ಸ್ವಾಮಿ ಬನ್ನಿ॥

ಎಪ್ಪತ್ತೇಳು ಕುಡ್‌ಜಡೆಯ ಜಡೆಯ ಎಡಕ ಬಲಕ ಒದರಿ. ಆತ್ಮಲಿಂಗವನ್ನು ತೆಗ್ದು ತೊಳೆದು ಬೆಳಗಿ ಅಂಗ್ಯೆನೊಳಗ ಮಡಿಗಿದ್ದಾರ. ಅಪ್ಪಾಜಿಯವರ ಆತ್ಮಲಿಂಗ ಆಕಾಸಕ್ಕೂ ಭೂಮಿಗೂ ಧಗಧಗ್ನ ಹತ್ಕ ಉರಿತಿತ್ತು. ಮಡಿವಾಳಶೆಟ್ಟಿ ನೋಡ್ದ,

ಆತ್ಮಲಿಂಗವ ಕಂಡ್ನಂತಾ
ಮೂರ್ಛೆ ಬಿದ್ದೋದನಂತಾ
ಯಾಕೋ ಮಾಚಪ್ಪ
ಅಂದರು ನನ್ನ ಗುರುವು
ನಿಮ್ಮ ಆತ್ಮಲಿಂಗದ

ಹಬೆಯ ನಾನು
ತಡೆಯಲಾರಿ ಮಾಯಕಾರ ||ಸಿದ್ದಯ್ಯ ಸ್ವಾಮಿ ಬನ್ನಿ||

ಒಂದು ಕೋಟಿ ಕೂರ, ಒಂದ್ ಕೋಟಿ ಹೇನು ಒಂದು ಸತ್ತಿಲ್ಲಾ. 'ಶಭಾಷ ನನ್ನ ಮಗನೇ ನಡಿಯೋ ಮಾಚಪ್ಪಾ' ಅಂತೇಳಿ ಬಿರುದು ಬಿಂಕಾನೆಲ್ಲಾ ಧರಿಸಿದಾಗ, ಮಡಿವಾಳ ಶೆಟ್ಟಿ ನಾಲ್ಕು ಮೂಲ ಎಂಟುದಿಕ್ಕು ಪೆಂಜನ ಸೇವಾ ಮಾಡಿ, ಕೆಂಚಣ್ಣ ಪೆಂಜನ್ನು ಎಡದ ಕಾಲ ಹೆಬ್ಬಟ್ಟಿಗೆ ಕಟ್ಕಂಡು ಕಾಳಣ್ಣ ಪೆಂಜನ್ನು ಬಲದ ಕಾಲ ಹೆಬ್ಬೆಟ್ಟಿಗ ಕಟ್ಕಂಡು ನೆತ್ತಿ ಮೇಲಾ ಚಪ್ಪರ ಕಟ್ಕಂಡು.

ಎಡದ ಕೈಯಿನ ಒಳಗ
ಮಡಿಯನ್ನು ಹಿಡಕಂಡು
ಬಲದ ಕೈಯಿನ ಒಳಗ
ಮಡಿಯನ್ನು ಬಿಟ್ಕಂಡು
ಮಾಲಂಗಿಯ ಮಡುವಾ
ಪ್ರೇಮದಲ್ಲಿ ಬಿಟ್ಟವರೆ
ತಲಕಾಡ ಮಡುವಿಗೆ ನನ್ನ
ರಾಜಗುರು ದಯವಾದರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಯಾವಾಗ ತಲಕಾಡು ಮಡವಿಗೆ ಬಂದ್ರು ಮಡಿವಾಳಶೆಟ್ಟಿ ಹೇಳ್ದ 'ಭಗಿರಾಜನ ಪುತ್ರಿ ಜಾಲಾರಾ ಗಂಗಾದೇವಿ ನಿದ್ದಾ ಮಾಡಾ ಟೇಮು ಅಂಥಾ ಹೇಳಿದರಲ್ಲಾ ಬುದ್ಧಿ ಆ ಗಂಗಮ್ಮ ನಿದ್ದಾ ಮಾಡಾ ಟೇಂ ನೋಡ್‌ಬೇಕು'. 'ಮಾಚಯ್ಯ ನಿಜವಾಗ್ಲೂ ನೋಡ ಬೇಕೋನೋ ಬಗ್ಗಿ ನೋಡು ನನಕಂದಾ' ಅಂದ್ರು. ಆ ತಲಕಾಡ ಮಡುವಲ್ಲಿ ಬಗ್ಗಿ ನೋಡುವಾಗ ಎರಡು ಪೆಂಜಿನ ಬೆಳಕು ಉದ್ಭವವಾಗಿ ಕಂಡಬಿಡ್ತು. ಧರೆಗೆ ದೊಡ್ಡವರು ಮುಂದಲ ಗಂಗಾ ಮುಂದ್ಕಾ, ಹಿಂದಲ ಗಂಗಾ ಹಿಂದ್ಕಾ ಹರಿತ್ತಿದ್ದಾದ ಗಂಗಾದೇವಿ ಅಗ್ನಿಸಾಕ್ಷಿಯಾಗಿ ಚಕ್ಕನ ನಿಂತಿದ್ದಾಳೆ. ಮಹಾನುಭಾವ ಕಲಿಮರಪ್ಪನನ್ನು ಕಂಡು ಕಣ್ಣಮುಚ್ಕಂಡು ಕೂತ್ಕಂಡ್ರು. ಮಾಚದೇವರಿಗೆ ಗೊತ್ತಾಗಲಿಲ್ಲ. ಮೂರ್ ಫರ್ಲಾಂಗ್ ದೂರ ಮಡಿ ಬಿಟ್ಕಂಡು ಬಡಗಲಾಗಿ ಹೊರಟ್‌ಬಿಟ್ಟಿದ್ದಾ ಮೂರ್ ಫರ್ಲಾಂಗ್ ದೂರದಲ್ಲಿ ಮೇಲ್ಕ ಅಂತು ನೋಡ್ದ ಮಾಚಯ್ಯ...

ನಡಿಯಲಿ ತಪ್ಪಾಯ್ತು
ನುಡಿಯಲಿ ತಪ್ಪಾಯ್ತು
ಮಡಿ ಮಾಡದರಲ್ಲಿ ತಪ್ಪಾಯ್ತು
ಯಾವುದರಲಿ ತಪ್ಪಾಗಿದ್ರು
ನಿನ್ನ ಪಾದಕ್ಕೆ ಅರುವಾಗಲಪ್ಪಾ ||ಸಿದ್ದಯ್ಯ ಸ್ವಾಮಿ ಬನ್ನಿ||

ಧರೆಗೆ ದೊಡ್ಡವರು ಹೇಳಿದ್ರು 'ಮಾಚಯ್ಯ ನಡೆಯಲೂ ತಪ್ಪಿಲ್ಲಾ, ನುಡಿದಂತಾ ನುಡಿಯಲ್ಲೂ ತಪ್ಪಿಲ್ಲಾ, ಮಡಿ ಮಾಡಿದ್ದರಲ್ಲೂ ತಪ್ಪಿಲ್ಲಾ, ಬೊಪ್ಪಗೌಡನದೊಡ್ಡಿಗ ಬರುವಾಗ ಏನಂತಾ ಹೇಳ್ಲಿ, ಹಕ್ಕಿ ಪಕ್ಷಿ ಸದ್ದಾಗಕಿಲ್ಲಾ, ನರಮುಂಡಾ ಮಕ್ಕಳು ಕಣ್ಣಿಗ ಕಾಣಕಿಲ್ಲಾಂತ ಹೇಳ್ತಿ ನಿಜವೋ ಸುಳ್ಳೊ', 'ನಿಜ ಪ್ರಭು' 'ತೆಂಕ್ಲಗ ನೋಡು ಎರಡು ಪಂಜಿನ ಬೆಳಕು ಉದ್ಭವ ಆಗಿತ್ತಿದ್ದಾದ. ಅವ ಯಾರ ಎತ್ಲ ಕಂದಾ, ನೀ ತಿಳ್ಕ ಬಪ್ಪಾ' ಅಂದರಯ್ಯ

ಅಪ್ಪಲ್ಲಾಡಿದ ಮಾತಾ
ತುಂಬಿದಾ ಸೋಮಾರ
ಮಾಚದೇವರು ಕೇಳ್ಕಂಡು
ಕಪ್ಪುಧೂಳ್ತ ಕೊಟ್ಟರ ನಾ
ತಕ್ಕಂಡೋಯ್ತಿನ ಅಂದರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

'ಈ ಕಪ್ಪು ಧೂಳ್ತ ಕೊಟ್ಟರ ಖಂಡಿತವಾಗಿ ತಕ್ಕ ಹೋಯ್ತಿನಿ ಪ್ರಭು' ಅಂದಾ. ಯಾವಾಗ ಮುತ್ತಿನ ಜೋಳ್ಗ ಬಲದ ಹಸ್ತವನ್ನು ಹಾಕಿ, ಮಟ್ಟಿ ಕಪ್ಪು ಭಸ್ಮಾಂಗವನ್ನು ಕೊಟ್ಟಿದ್ದಾರೆ.

**ಅಡಿ ಟಿಪ್ಪಣಿ**

ಹನ್ನೆರಡನೇ ಶತಮಾನದ ಮಡಿವಾಳ ಮಾಚಯ್ಯನನ್ನೇ ಪರಿಕಲ್ಪನೆಯಾಗಿ ಇಲ್ಲಿ ತಂದುಕೊಂಡಿದ್ದಾರೆ. ಸುಮಾರು ೧೫ನೇ ಶತಮಾನದಲ್ಲಿ ಇದ್ದ ಮಂಟೇಸ್ವಾಮಿಗಳ ಜೊತೆಯಲ್ಲಿ ಉತ್ತರದಿಂದ ಫಲಹಾರದಯ್ಯನೆಂಬ ಮಡಿವಾಳ ಅವರೊಂದಿಗೆ ದಕ್ಷಿಣದ ಕಡೆ ಪ್ರಯಾಣ ಮಾಡಿದ ಎಂಬ ಸೂಚನೆಗಳು ಸಿಗುತ್ತವೆ. ಅವನನ್ನು ೧೨ನೇ ಶತಮಾನದ ಮಾಚಯ್ಯನಿಗೆ ಸಮೀಕರಿಸಿದ್ದಾರೆ. ಇಷ್ಟೇ ಅಲ್ಲದೆ ೬೩ ಪುರಾತನರಲ್ಲಿ ಒಬ್ಬನಾದ ಸಿರಿಯಾಳನ ಕತೆಯನ್ನು ಮಾಚಯ್ಯನ ಕತೆಯಾಗಿ ಮಾಡಿಕೊಂಡಿದ್ದಾರೆ. ಮಗನನ್ನು ಕೂದು ಶಿವನಿಗೆ ಎಡೆಮಾಡುವುದು ಕೇಳುಗರಿಗೆ ಹೃದಯ ವಿದ್ರಾವಕ ಕತೆಯಾಗಿರುವುದರಿಂದ ಎಲ್ಲ ಕಲಾವಿದರು ಸಿರಿಯಾಳನ ಕತೆಯನ್ನು ಮಾಚಯ್ಯನಿಗೆ ಹೋಲಿಸಿ ಹಾಡುತ್ತಾರೆ. ಆದರೆ ಮಂಟೇಸ್ವಾಮಿ ಓದು ಪಠ್ಯಕ್ಕೆ ಇದು ಒಗ್ಗದೆ ಇರುವುದರಿಂದ ಅದನ್ನು ಇಲ್ಲಿ ತಂದಿಲ್ಲಾ.

೯

# ಕಲಿ ಸಾರಿದ ಸಾಲು

ಅಪ್ಪ ಕೊಟ್ಟ ಕಪ್ಪು ಧೊಳ್ತ
ಎತ್ಕಂಡು ಮಾಚಪ್ಪಾ
ಕಲಿಪುರಷನ ದಂಡಕಾಗ
ಓಡಿ ಓಡಿ ಬಂದರಂತಾ ||ಸಿದ್ದಯ್ಯ ಸ್ವಾಮಿ ಬನ್ನಿ||

'ಯಾರ್ನಾ ನೀನು' ಅಂದಾ

'ನಾನು ಕಲಿ ಪುರುಷ ಕಾಣ್ಲಾ'.

'ಹೊತ್ತಿರುವರ್‍ಯಾರು'

'ನನ್ನ ಕೈ ಹಿಡ್ದ ಹೆಂಡ್ತಿ'

'ನಡೆಕ ಬರವರ್‍ಯಾರು?

'ನನ್ನ ಸ್ವಂತ ತಾಯಿ'

'ತಾಯಿ ಕೈಲಿ ಕೊಟ್ಟಿರದೇನಪ್ಪಾ'

'ನನ್ನ ಹೆಂಡಿರು ಮೆಟ್ಟಿದ್ದ ಚಂದದ ಕಾಲಿನ ಚಮ್ಮಾಳಿಗೆ'

'ಅಲ್ಲಿ ಬರುವನ್ಯಾರು'

ನನ್ನ ಜಲುಮ ಕೊಟ್ಟಾ ತಂದಾ'

'ತಾಂಬೂಲ ಪೀಕದಾನಿ ತಂದ ಕೈಲಿ ಕೊಟ್ಟಿದ್ದೀನಿ'

'ಗಂಡ ಹೆಂಡಿರು ಮಲಿಕಳಾ ಸುಪ್ಪತ್ತಿಗನಾ ತಂದ ಕೈಲಿ ಹೊರಿಸಿದ್ದೀನಿ. ಕೈಲಿ ಹಿಡ್ದ ಹೆಡ್ತಿ ಹೊತ್ಕಂಡು, ತಾಯಿ ತಂದಾನ ಕಾಲ್ ನಡಗಲಿ ನಡೆಸ್ಕಂಡು ತೆಂಕ್ಲಿಂದ ಬಡ್ಗಲಾಗಿ ಹೋಗ್ತೀನಿ' ಕಲಿ ಆಡಿದ ಮಾತ್ ಕೇಳ್ಕಂಡು ಎರಡು ಕರಣ ಮುಚ್ಕಂಡ ಮಡಿವಾಳ ಮಾಚಯ್ಯ. 'ಯಾಕೋ ಹುಚ್ಚುಮುಂಡಾ ಮಗ್ನೆ' ಅಂದಾ 'ನನ್ನ ಯಾರಾಂತ ತಿಳ್ಕಂಡಾ' ಅಂದಾ ಮಾಚಯ್ಯ

ಧರೆಗೆ ದೊಡ್ಡವರ ಮಗ
ಮಡಿವಾಳ ಮಾಚಪ್ಪಾ
ಮಾಚಪ್ಪಾಡಿದ ಮಾತಾ
ಕಲಿಪುರಷ ಕೇಳ್ಕಂಡು
ಧರೆಗೆ ದೊಡ್ಡವರ ಸತ್ಯ
ನೋಡಬೇಕು ಅಂದರಂತ ||ಸಿದ್ದಯ್ಯ ಸ್ವಾಮಿ ಬನ್ನಿ||

ಧರೆಗೆ ದೊಡ್ಡವರೂಂತ ಹೇಳಿದಲ್ಲಾ 'ಆದ್ರು ನಿನ್ನ ಧರೆಗೆ ದೊಡ್ಡವರ ಸತ್ಯ ನೋಡ್ತಿನಿ' ಅಂದಾ ಕಲಿ ಪುರುಷ. ಮಡಿವಾಳ ಮಾಚಯ್ಯ ಹೇಳ್ದ 'ಇದೋ ಈ ಅಪ್ಪನ ಮನಾ ಕಪ್ಪು ಧೂಳ್ತ ತೆಗ್ದು ಮೂರು ಮಂಡಲವನ್ನು ಬರದಿದ್ದೀನಿ. ನೀನ ಆಡಿದ ಮಾತಾ ಅಪ್ಪಾಜಿಯವರ್ಗ ಹೇಳ್‌ಬಿಟ್ಟು ಬರಾಗಂಟ ಈ ಮೂರು ಮಂಡಲಗಳನ್ನು ದಾಟಿ ಬಂದ್ ಬಿಟ್ಟರಾ ನಿನ್ನ ತಲಾ ಸಾಸ್ರವಾಗಲಿ' ಅಂದರು. ಆ ಕಪ್ಪು ಧೂಳ್ತವನ್ನು ತೆಗ್ದು ಮೂರು ಮಂಡಲವನ್ನು ಬರೆದಿದ್ದಾನಾ ಅಪ್ಪಾಜಿಯವರ ಹತ್ರಕ್ಕೆ ಬಂದು ಸಾಷ್ಟಾಂಗ ನಮಸ್ಕಾರ ಮಾಡಿದ್ದಾನ. 'ಯಾನಾಯ್ತು ಮಾಚಯ್ಯ' ಅಂದ್ರು. 'ಸ್ವಾಮಿ ಅವ್ನು ಬಾಯನಲ್ಲಿ ಹೇಳ್ತದಾ. ಈ ಕರಣದಲ್ಲಿ ಕೇಳಿ, ಈ ಬಾಯ್ನಲ್ಲಿ ಹೇಗ್ ಹೇಳ್ಲೀ ಬುದ್ಧಿ' ಅಂದಾ. ತಲಕಾಡು ಮರಳ ಗುಡ್ಡದೊಳಗಾ ನಮ್ಮಪ್ಪಾಜಿ ಪಡ್ಗಾಗಿ ಮೊಖ ಹಾಕ್ಕಂಡು ಮೂಡಿ ಬರುವ ಹೊತ್ತನಾಗಿ ಮುಳಿಗಿಬರೋ ಸೂರ್ಯನಾಗಿ ಕುಂತಿದ್ದಾರಾ. 'ಮಾಚಯ್ಯ ನೀ ಏನು ಹೇಳ್‌ಬೇಕಾಗಿಲ್ಲಾ ಮುಂದಾ ಬರಾದನನ್ನೆಲ್ಲಾ. ನಾ ಇಂದ ಹೇಳ್ತೀನಿ. ತಾಮ್ರ ತಗಡ ತಕಪ್ಪಾ, ನವಿಲುಗರಿ ತಕ್ಕಾ, ತಾಮ್ರ ತಗಡಿನ ಒಳಗ ಕಲಿಪಟ್ಟಿ ಮಾಡು ಮಗನೆ

ಊರು ಕಾಡಾಗ ಬೇಕು,
ಕಾಡು ಊರಾಗ ಬೇಕು
ಅತ್ತೆ ಸೊಸೆಯಾಗ ಬೇಕು
ಗರ್ತಿಗೌಡ್ಯಾಗಬೇಕು
ಕುಲಕುಂಟ್ಯದ ಒಳ್ಗ
ನ್ಯಾಯ ಪಂಚಾಯ್ತಿ ಒಳ್ಗ
ಈ ಮುಟ್ಟು ಗೌಡಿ ಮಕ್ಕಳ ಮಾತೇ
ಮುಂದಾ ಆಗ ನಡೆಯಬೇಕು ||ಸಿದ್ದಯ್ಯ ಸ್ವಾಮಿ ಬನ್ನಿ||

ನಿತ್ಯಬುಗುಡಿ ಮುಟ್ಟುಸಾಡಿ
ಮಕ್ಕಳ ಮಾತೆ
ಮುಂದಾ ನಡೆಯಬೇಕು
ಸತ್ಯವಂತರ ಮಾತು

ಕಿತ್ತಾಟವಾಗಬೇಕು
ಬಾವಿ ನೀರೊಂದಕ್ಕಾ
ಬ್ಯಾಗಾಟ ಆಗ್ಬೇಕು
ಹೇರ್‌ಅಡ್ನ ಹೊರಬೇಕು
ಒಂದು ಬಿಂದ್ಗ ನೀರಿಗೆ
ಒಂದಣ ಆಗಬೇಕು ||ಸಿದ್ದಯ್ಯ ಸ್ವಾಮಿ ಬನ್ನಿ||

ಗಂಡಸತ್ತ ಮುಂಡಾ
ಹನ್ನೊಂದ ವರ್ಷಾ
ಈ ರಾಜ್ಯನಾಳಾ ಬೇಕು
ಗಂಡು ಅನ್ನೊ ಜಾತಿ
ದಂಡ್ಗ ಹೋಗಬೇಕು
ಕೀಳು ಮೇಲಾಗಬೇಕು
ಮೇಲು ಕೀಳಾಗಬೇಕು
ಕೀಳು ಕೀಳು ಅನ್ನೊವರೆ
ಕೀಳ್‌ಜಾತಿ ಆಗಬೇಕು ||ಸಿದ್ದಯ್ಯ ಸ್ವಾಮಿ ಬನ್ನಿ||

ಗುಡ್ಡು ಗುಡ್ಡಗಳಿಗೆಲ್ಲಾ
ಗುದ್ದಾಟವಾಗ್ಬೇಕು
ದಾಸ ದಾಸಗಳೆಲ್ಲಾ
ದೇಸಾಂತ್ರ ಹೋಗಬೇಕು
ಜೋಗ್ ಜೋಗ್‌ಳೆಲ್ಲಾ
ಗೋಜಾಟ ಆಗ್ಬೇಕು
ಕಾವಿ ಹೊದ್ದವರೆಲ್ಲಾ
ಕಳ್ಳಾಗಿ ತಿರ್‍ಗಬೇಕು
ನಾಳಾ ಕಲಿಯುಗದಲ್ಲಿ
ಲಿಂಗಾಯ್ತನ ಸರಕಾರ
ಗಂಗಡಕಾರನ ಅಧಿಕಾರ
ನಾಳಾ ಮುಟ್ಟಿಗೋಡಿ ಮಗ್ನಗ
ರಾಜ ಪಟ್ಟಾಗಬೇಕು
ಪತುರತಾ ಮಕ್ಳು ನಾಳಾ
ಪಾಪ ಹಿಡ್ದು ಹೋಗಬೇಕು ||ಸಿದ್ದಯ್ಯ ಸ್ವಾಮಿ ಬನ್ನಿ||

ಈ ರೀತಿ ಕಲಿಪ್ರಪಂಚ ದೇಶದ ಮೇಲಾ ಹೆಚ್ಚತಾ ಬರ್‍ತ್ತಿದ್ದಾದ, ಈ ಕಲಿಯನ್ನು ನಾನು ಕಣ್ಣಲ್ಲಿ ನೋಡಲಾರೆ. ಎರಡು ಕರಣದಿಂದ ಕೇಳಲಾರೆ. ನರಮಾನವರ ಕಣ್ಣಿಗ ನಾನು ಮರ್‍ತ್ಯ ಲೋಕಕ್ಕ ಮರೆಯಾಗೋಗಬೇಕು ಕಂದಾ, ಮಡಿವಾಳ ಶೆಟ್ಟಿ ಹೇಳ್ದ 'ಮರ್‍ತ್ಯ ಲೋಕಕ್ಕೆ ಮರೆಯಾಗಿ ಹೋದ ಮೇಲಾ ಮರಳಿ ಯಾವಾಗ ಬರ್‍ತ್ತೀರಿ' ಅಂದಾ. ಏಳನೇ ಅಧ್ಯಾಯದಲ್ಲಿ ಬರ್‍ತ್ತೊ ನನಕಂದಾ, ಹನ್ನೊಂದನೇ ಅವತಾರದಲ್ಲಿ'

ಎಲ್ಲ ದೇವರ ಪೂಜಾ
ನಿಲ್ಲುತಾ ಬರಬೇಕು
ನರರ ಆಳ್ಕ ಹೆಚ್ಚಾಗಬೇಕು
ಸುರರ ಆಳಕಾ ಕಮ್ಮಿಯಾಗಿ
ದೇವತೆ ದೇವಮಾನವರೆಲ್ಲಾ
ಕಲ್ಲಾಗಿ ನಿಂತ್ಕಬೇಕು
ಕಗ್ಗಲಿನ ದೇವ್ರಗಾ
ಕಷ್ಟ ಬಂದ ಕಾಲದಲ್ಲಿ ಮಾತ್ರ
ಕೈ ಎತ್ತಿ ಮುಗಿಬೇಕು
ಏಳು ವರ್ಷದ ಎಳ ಬಾಲಕಿ
ಹೊಟ್ಟೆ ಒಳಗಾ
ಚೆನ್ನಬಸವಣ್ಣನವರು
ತಾವುಟ್ಟಿ ಬರುವಾಗ
ನರಮುಂಡಾ ಮಕ್ಕಾ
ನಾಳಾ ಒಟ್ಟಾಗಿ ಸಾಯಬೇಕು ||ಸಿದ್ದಯ್ಯ ಸ್ವಾಮಿ ಬನ್ನಿ||

'ತಲಕಾಡು ಮರುಳುಗುಡ್ಡ ಸಣ್ಣಕ್ಕಿ ಬೇಳಾ ಆಗ್ಬೇಕು. ಈ ಕಲಿಯುಗ ನೋಡಲಾರ್‍ದೆ ಕಣ್ಣಗ ಮರೆಯಾಗಿ ಹೋಗ್ತೀನಿ' ಮಾಚದೇವರು ಹೇಳಿದ್ರು 'ಸ್ವಾಮಿ ತೆಂಕ್ಲಿಂದಾ ಕಲಿ ಸಾರ್‍ಕ ಬಂದದಕೂ ಇಲ್ಲಿ ಕಲಿ ಮುಳುಗೋಗದಕ್ಕೂ ಇದಕ್ಕೇನಾದರೂ ನಾಮಾಂಕಿತವಾಗ್ಲಿ' ಅಂದ್ರು, 'ಮಾಚಯ್ಯ ಕಲಿಸಾರ್‍ಕಂಡು ತೆಂಕ್ಲಿಂದ ಬಂದದಕಾ_

ಕಲಿಯೂರು ಕಲ್ಲೂರು ಆಗಲೆಪ್ಪಾ
ಮುಕ್ಕಾಲ ಭಾಗ ಕಲಿಯ
ಮುಳುಗ್ಸದದಕಾ ಮಗನೆ
ಕಲ್ಲೂರ ತೋಪ ಆಗಲೆಪ್ಪಾ
ಮುಂಚರಿ ಮಾಚಪ್ಪಾ
ಹಿಂಚರಿ ಮಾಗುರುವೂ

ತುಂಬಿದಾ ಸೋಮಾರ ದಿವ್ಸ
ಮಾಲಂಗಿ ಮಡುವ
ಪ್ರೇಮದಲ್ಲಿ ಬಿಟ್ಟವರೆ
ಕುಕ್ಕೂರ ಕಡೆದವರೆ
ತಲಕಾಡ ಕಡದವರೆ
ಸರಗೂರು ಬೀದಿಗಾ ವಸ್ನ
ರಾಜಗುರು ದಯಮಾಡವರೆ ||ಸಿದ್ದಪ್ಪಾಜಿ ಸ್ವಾಮಿ ಬನ್ನಿ||

# ೧೦

## ಕೆಂಪಾಚಾರಿಯನ್ನು ಸಿದ್ದಪ್ಪಾಜಿ ಮಾಡಿದ ಸಾಲು

ಬೊಪ್ಪಣ್ಣಪುರದ ಮಠಮನೆಯಲ್ಲಿ ಧರೆಗೆ ದೊಡ್ಡವರು ಮಂಟೇಲಿಂಗಯ್ಯನವರು ಆನೆ ಮೇಲೆ ಆರು ಸಾವಿರ ಕಾಗದ. ಒಂಟೆ ಮೇಲೆ ಎಂಟು ಸಾವಿರ. ಕಾಗದ ಹದಿನಾಕು ಸಾವಿರ ಕಾಗದ ಹಳ್ಳಳ್ಳಿಗೆ ಕಳಿಸಿ

ಕೋಳಿ ಕೂಗದ ಹಳ್ಳಿಗೆಲ್ಲ
ತುಂಬಿದ ಶುಕ್ರವಾರದಲ್ಲಿ
ಒಪ್ಪತ್ತಿನ ಗಳಿಗೆಂಯೊಳಗೆ
ನಾವು ಹುಚ್ಚುಮೂಳಿ ಕರೆತಂದು
ಲಾಂಚಾಣವನ್ನು ಮಾಡಬೇಕು
ನೀವು ಕಾವಿ ಹೊದ್ದ ಜಂಗಮರೆಲ್ಲ
ಲಿಂಗ ಕಟ್ಟಿದ ಐಗಳೆಲ್ಲ ಬರಬೇಕು ||ಸಿದ್ದಯ್ಯ ಸ್ವಾಮಿ ಬನ್ನಿ||

ಬೊಪ್ಪಣಪುರದಲ್ಲಿ ಏನೇನು ನಡೀತಾದೆ. ಬಂದಂತ ಲಿಂಗಜಂಗಮರಿಗೆಲ್ಲ ಅಡಿಗೆ ಊಟ ಸಿದ್ಧವಾಗಬೇಕೆಂದು ಸಣ್ಣಕ್ಕಿ ಸಾವಿರಮೂಟೆ, ಎಣ್ಣೆ ಮೂಗಂಡಿಗ, ಅವರ ಪೂಜೆಗೆ ಹಣ್ಣುಹೆಡೆಗೆ ಹದಿನೈದು, ಇಂದ್ರಲೋಕಕ್ಕೆ ಕರಕರನೆ ಕಾಗದ ಬರೆದು

ಬಿಳಿಯ ಮದ್ದಾನೆ ಬರಬೇಕು
ಗರುಡ ಗಂಧರ್ವರು ಬರಬೇಕು
ಕಿನ್ನರ ಕಿಂಪುರುಷರು ಬರಬೇಕು
ರಂಭೆ ಊರ್ವಶಿಂಯರು ಬರಬೇಕು ||ಸಿದ್ದಯ್ಯ ಸ್ವಾಮಿ ಬನ್ನಿ||

ಧರೆಗೆ ದೊಡ್ಡವರು ಕಲ್ಯಾಣಕ ಕಾಗದ ಕಳ್ಸಿ
ಹೆಚ್ಚಿನ ದೊಡ್ಡ ಬಸವಣ್ಣನವರು ನೀವು
ನೀಲಮ್ಮನ ಸಹಿತವಾಗಿ ಬರಬೇಕು
ವೈಕುಂಠಕ್ಕೆ ಕಾಗದ ಬರೆದ್ಬರೆ
ನಾರಾಯಣನವರು ಜಗಕೆ ದೊಡ್ಡವರು

ಎಳೆಯ ತೊಳಚಮ್ಮ ಲಕ್ಷ್ಮಿದೇವಿಸೈತವಾಗಿ
ಬರಬೇಕು ನಮ್ಮ ಮಠಮನೆಗೆ
ನಂಜನಗೂಡಿಗೆ ಓಲೆ ಬರೆದ್ವರೆ
ವಿಷಕಂಠ ದೆಸಮುನಿ ನಂಜುಂಡ
ಆಳುಪಲ್ಲಕ್ಕಿ ಸೂಳೇರ ವಾಲಗದೊಡನೆ
ದೇವೀರಮ್ಮನ ಸೈತವಾಗಿ ಬರಬೇಕು
ಮುಡುಕುತೊರೆಯ ಮುಮ್ಮೇಳದ ಮಲ್ಲಣ್ಣ
ಜಗದೊಡತಿ ಪಾರ್ವತಿತಾಯಿ ಸೈತವಾಗಿ ||ಸಿದ್ದಯ್ಯ ಸ್ವಾಮಿ ಬನ್ನಿ||

ನಮ್ಮ ಮಠಮನೆ ಗುರುಪದೇಶಕೆ ಬರಬೇಕು. ಶರಣ ಕೆಂಪಣ್ಣನ ಕಂಕಣಧಾರೆಗೆ ಬರಬೇಕು. ದೇವ ಮಾನವರೆಲ್ಲ ಒಬ್ಬೊಬ್ಬರಾಗಿ ಇಳಿದು ಬಂದರಲ್ಲ ರಾಯ ಬೊಪ್ಪಣಮರಕೆ. ಧರೆಗೆ ದೊಡ್ಡವರು ಆದಿಸಿದ್ಧನ ಕರೆದು ನೀನು ಮಾರಳ್ಳಿ ಸ್ಥಳಕ್ಹೋಗಿ ಬಾಚಿ ಬಸಪ್ಪ ಮುದ್ದಮ್ಮ ಸೈತವಾಗಿ ಆರು ಮಂದಿ ಗಂಡುಮಕ್ಕಳ ಕರೆದು ಆರು ಮಂದಿ ಸೊಸೆಯರ ಸೈತವಾಗಿ ಕೆಂಪಣ್ಣನ ಕಂಕಣಧಾರೆಗೆ ಬರಬೇಕು. ಅವರ ಕುಟುಂಬ ಪರಿವಾರವೆಲ್ಲ ಬಂದು

ಗುಂಜು ಮಾವಿನ
ತೋಪಲ್ಲಿ ಗುಡಾರ ಊದು
ಸುರು ಮುನ್ನೂರು ಕೋಟಿ ಶರಣರೆಲ್ಲ
ಬೊಪ್ಪಣಮರದಲ್ಲಿ ಸೇರುವಂತ ಗಳಿಗೇಲಿ ||ಸಿದ್ದಯ್ಯ ಸ್ವಾಮಿ ಬನ್ನಿ||

ಧರೆಗೆ ದೊಡ್ಡವರಾದ ಮಂಟೇಲಿಂಗಯ್ಯನವರು ರಸಸಿದ್ದರನ್ನೆಲ್ಲಾ ಕಲ್ಲುಗವಿಗೆ ಕಳಿಸಿ. ಹುಚ್ಚುಮೂಳಿಯ ಕರಕೊಂಡು ನೀವು ಬರುಹೋಗಿ. ರಸಸಿದ್ಧರೆಲ್ಲಾ ಕಲ್ಲುಗವಿಯ ಬಾಯಲ್ಲಿ ನಿಂತು ಒಂದು ಆಲ ಆಲುತಾರೆ, ಹುಚ್ಚು ಮೂಳಿಯ ಕೂಗುತಾರೆ, ಆಲೀದ ಸದ್ದ ಕೇಳಿದರೆ ಶರಣ ಕೆಂಪಣ್ಣ,

ಅವನ ನತ್ತಿಮ್ಯಾಲೆ ಮತ್ತಿಮರ ಬೆಳೆದೈತೆ
ಅವನ ಬೆನ್ನಿನ ಮ್ಯಾಲೆ ಬಿಲ್ಪತ್ರೆ ಬೆಳೆದೈತೆ
ಅವನ ಹೊಟ್ಟೆಯ ಮ್ಯಾಲೆ ತೊಟ್ಟಿಗಿಡ ಬೆಳೆದೈತೆ
ಅವನ ಭುಜದ ಮೇಲೆ ಬೂರುಗದಮರ ಬೆಳೆದೈತೆ
ಅವನ ತಲೆಯ ಮೇಲೆ ತಾರೆಮರ ಬೆಳೆದೈತೆ
ಕರ್ಣದಲ್ಲಿ ಕಾಳಿಂಗ ಮರಿ ಮಾಡವಲ್ಲ
ಹುಬ್ಬಿನೊಳಗೆ ಗುಬ್ಬಕ್ಕಿ ಮರಿ ಮಾಡವಲ್ಲ
ಮೂಗಿನೊಳಗೆ ದಬ್ಬಹುಲ್ಲು ಕಡೆದವಲ್ಲ
ದಡದಡನೆ ಎದ್ದಾನಂತೆ ಧೀರ ಕೆಂಪಣ್ಣ

ಗಕ್ಕನೆ ನೋಡಿದನಂತೆ ಶರಣ ಕೆಂಪಣ್ಣ
ಆಗಸೆಯ ಕಾಯಿನಂತೆ ಅವನಿಗೆ
ಅರವತ್ತು ಕುರುಜಡೆ ಆಗವಲ್ಲ
ನುಗ್ಗೆಯ ಕಾಯಿನಾಗೆ ಅವನಿಗೆ
ನೂರೆಂಟು ಕುರುಜಡೆ ಆಗವಲ್ಲ
ಜಡಮುಡಿಯ ಬಿಟ್ಕಂಡು ಎದ್ದನಂತೆ
ಹಾವಿನೊರೆಯ ಹೆಗಲಮ್ಯಾಲೆ ಮಡಿಕೊಂಡು
ಹುಟ್ಟು ನಿರ್ವಾಣದೊಳಗೆ ಬರುತಾನೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಹಾವಿನ ಹೊರೆಹೊತ್ತು ಬರುತ್ತಿರುವವನ, ಹಾದೀಲಿ ನಿಂದಿರುವಂತ, ಮಹಾತ್ಮರು 'ಇದೇನಪ್ಪ ನಿಮ್ಮ ರೂಪು ಸಿದ್ಧಗುರುವೆ' ಸುರುಮುನ್ನೂರು ಕೋಟಿ ಶರಣರೆಲ್ಲ 'ಇದೇನಪ್ಪ ನೀನು ಹೊತ್ತಿರುವ ಹೊರೆ' ಎಂದರೆ 'ಇದು ಮಾಗಳಿಬೇರಿನ ಹೊರೆ. ಕೋಟಿನ ದೊಡ್ಡಮ್ಮನವರಿಗೆ ಇದು ಉಪ್ಪಿನಕಾಯಿಗೆ ಸಲುವಾಗಿ'

ಧೀರ ಕೆಂಪಣ್ಣ ಆಡಿದ ಮಾತುಗಳ ಕೇಳಿ
ಅವರು ಮಾಯಿಷಿಗಳು ಪಕ್ಕನೆ ನಗುತಾರೆ
ಹೊತ್ತಂತ ಹಾವಿನ ಹೊರೆಯನಾದರು
ಎಡಗಡೆಗೆ ಇಳುಕಿ ಮಡುಗುಬುಟ್ಟು
ಅವನು ಗುರುಪಾದವ ತಬ್ಬಿಕಂಡು
ಕೆಂಪಣ್ಣ ದುಃಖವನ್ನು ಮಾಡಿದರೆ
ಧರೆಗೆ ದೊಡ್ಡವರು ನಮ್ಮಸ್ವಾಮಿ
ಮಂಡೆ ಸವರುತಾರೆ ಮೈದಡವುತಾರೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಗುಂಬುಮಾವಿನ ತೋಪಲ್ಲಿ ಗುಡಾರವನ್ನೆ
ಮಾಡಿಕೊಂಡಿದ್ದಂತ ತಂದೆತಾಯಿಗಳನ್ನು ಕರೆದು
ಅಣ್ಣ ತಮ್ಮಂದಿರು ಬನ್ನಿರೆಂದು
ಅತ್ತಿಗೆ ನಾದಿನಿಯರು ಬನ್ನಿರೆಂದು ||ಸಿದ್ದಯ್ಯ ಸ್ವಾಮಿ ಬನ್ನಿ||

ಮಂಟೇಲಿಂಗಯ್ಯನವರು ಕೆಂಪಣ್ಣ ಶರಣನ ನೀವು ದಾನ ಮಾಡಿರಯ್ಯ ಎಂದಾರೆ, ಬಂದಂತ ತಂದೆ ತಾಯಿಗಳು ಅಣ್ಣಂದಿರು ತಲೆಯಮೇಲೆ ಮುಸುಗಿಟ್ಟುಕೊಂಡು

ಅವರು ಖಿಂಡುಗ ದುಃಖವ ಮಾಡುತಾರೆ
ಕೈಯಿಡಿದು ಮಗನ ಕೊಡುತಾರೆ ||ಸಿದ್ದಯ್ಯ ಸ್ವಾಮಿ ಬನ್ನಿ||

'ನಿಮ್ಮ ಕೈಗೆಕೊಟ್ಟೇವಿ ಧೀರ ಕೆಂಪಣ್ಣ 'ಗುರುಪಾದಕೆ ಒಪ್ಪಿಸಿಕೊಳ್ಳಿ, ಶರಣನ' ನಾವು ಭಕ್ತಿಯೊಳಗೆ ಕೊಟ್ಟೇವಿ, ನಾವು ನಿಜದೊಳಗೆ ಕೊಟ್ಟೇವಿ' ಕೆಂಪಣ್ಣನ. ನಿಮ್ಮ ಮಠಮನೆಗೆ

ನಾವು ನಡಿತೀಕತಿಮಿ, ಬಿತ್ತಿದ ಬೆಳೆಯ ನಾವು ಕೊಡುತೀಮಿ' ತಂದೆತಾಯಿಗಳು ಆಡಿದ ಮಾತುಗಳ ಕೇಳಿ ಧರೆಗೆ ದೊಡ್ಡ ಮಂಟೇಲಿಂಗಯ್ಯನವರು

ನಿಮಗೆ ಉತ್ತುತ್ತಮವಾಗಿ ಉಗಮೇಲಾಗಿ
ನೀವು ಹೆಚ್ಚೊಕ್ಕಲಾಗಿ ಬಾಳಿ ಕಂದಗಳೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಎಂದು ಆಶೀರ್ವಾದವ ಕೊಟ್ಟು, ಬುಟ್ಟು, ಶರಣ ಕೆಂಪಣ್ಣನವರ ಕೈಹಿಡಿದು ಕರಕೊಂಡು

ಹಾಲುಗೊಳಕೆ ನಮ್ಮಸ್ವಾಮಿ ಬರುತಾರೆ
ನೀರುಗೊಳಕೆ ನಮ್ಮಸ್ವಾಮಿ ಬರುತಾರೆ
ಹಾಲುಗೊಳದಲ್ಲಿ ಶರಣನ ಮೀಯಿಸಿ
ನೀರುಗೊಳದಲ್ಲಿ ಜಳಕವಾಡಿಸಿ
ಹಡಪದ ಹಂಪಣ್ಣನವರ ಕರೆದು
ಚವರಕ್ಕೆ ಸಿದ್ದ ಮಾಡುತಾರೆ
ಬೆಣತಕ್ಕಿ ಬೆಲ್ಲದಚ್ಚು ಚಿಪ್ಪಿನ ಬಾಳೆಹಣ್ಣು
ಮುಕ್ಕಣ್ಣೇಶ್ವರನ ವರದ ಹಣ್ಣುದೆಂಗಿನಕಾಯಿ
ರಸ ಕಜ್ಜೂರವಂತೆ ರಸದಾಳಿ ತುಂಡಂತೆ
ತಾಂಬೂಲದ ಈಳ್ಯಗಳ ತಟ್ಟೇಲಿ ತುಂಬಿ
ಹಡಪದ ಹಂಪಣ್ಣನ ಮುಂದೆ ಸುರಿದು ||ಸಿದ್ದಯ್ಯ ಸ್ವಾಮಿ ಬನ್ನಿ||

ನೆನಕ್ಕಿ ನೆನಗಡಲೆ ಹಣ್ಣು ಫಲ್ಹಾರಗಳ ತಂದೆತಾಯಿ ಬಂದು, ಬಂಧುಬಳಗ ಬಂದು, ಫಲ್ಹಾರ ಮುಟ್ಟಿ ಹೃದಯಕೆ ಸಲ್ಲಿಸಿದರೆ, ಕೆಂಪಣ್ಣ ಶರಣನೂ ಸಲ್ಲಿಸಿಕೊಂಡು, ಹಣ್ಣು ಫಲ್ಹಾರಗಳನ್ನೆ ಸಲ್ಲಿಸುವಂತ ಗಳಿಗೇಲಿ ಮೂಡಲನಾಡಿನಿಂದ ಮುತ್ತಿನ ಮಣೆ ಬಂದು

ಶರಣ ಕೆಂಪಣ್ಣನ
ಮಣೆಮೇಲೆ ನಿಲ್ಲಿಸಿ
ತೀರ್ಥ ಎಸೆದು
ದೇವಮಾನವರು ಹರಸಿ ||ಸಿದ್ದಯ್ಯ ಸ್ವಾಮಿ ಬನ್ನಿ||

ಹಡಪದ ಹಂಪಣ್ಣನಿಗೆ ಹುಕ್ಕುಂ ಕೊಡುತಾರೆ, ಹಡಪದ ಹಂಪಣ್ಣ ಭೂಮಿಗೆ ಶರಣೆಂದು, ಚವರದ ಕತ್ತಿಯ ಹಿಡಿದು, ಕೆಂಪಣ್ಣನ ಮಂಡೆನಾದರು ತೆಗಿತಾರೆ, ಬೋಳುಮಂಡೆ ಶರಣ ಕೆಂಪಣ್ಣನಿಗೆ

ಆರುತಪ್ಪಲೆ ನೀರು ಹೋರಾಡಿ ಕಾದಾವೆ
ಗಂಧಬಿಟ್ಟು ಗಮಗರಿದು ಕಾದಾವೆ
ಹತ್ತುತಪ್ಪಲೆ ನೀರು ಉಕ್ಕುರಿಸಿ ಕಾದಾವೆ
ಪಚ್ಚೆತೆನೆಯೊಳಗೆ ಗಮಗರಿದು ಕಾದಾವೆ

ಗುಂಬದ ನೀರು ಗುಳಗುಳನೆ ಕಾದಾವೆ

ಮುಡವಾಳದೊಳಗೆ ಗಮಗರಿದು ಕಾದಾವೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಕಾದಂತ ನೀರನ್ನು ತಂದೆತಾಯಿಗಳು ಬಂಧುಬಳಗವೆಲ್ಲ ಚಿನ್ನದ ಗಿಂಡಿಂಯೊಳಗೆ ಎರೆದು ಕೆಂಪಣ್ಣನಿಗೆ ಶಾಸ್ತ್ರಪೂಜೆ ಮಾಡಬೇಕೆಂದು ಹಸಿರು ಚಪ್ಪರದಡಿಲಿ ನಿಲ್ಲಿಸ್ಕಂಡು

ಬಣ್ಣದಮಂದಲಿಗೆಯನ್ನೆ ಹರಡಿ

ಮೊಗ್ಗುತಂದು ಮೂಗುಳವ ಚೆಲ್ಲಿ

ಅವರು ಪಾಗುಪಟ್ಟೆಯನೆ ಹರಡಿ

ತೆಂಕಲನಾಡಿಂದ ತೇಗದ ಮಣೆತರಿಸಿ

ಕೈಸೋಕಿದರೆ ಗೆಜ್ಜೆ ಗಲಿರೆನ್ನುತಾವೆ

ಬಡಗಲನಾಡಿಂದ ಬೆಡಗಿನ ಮಣೆತರಿಸಿ

ಬೆರಳು ಸೋಕಿದರೆ ಗಲಿರೆನ್ನುತಾವೆ

ಹಸೆಮಣೆಯು ಮುತ್ತೈದೆಯರು ಮಡಗಿ

ಕಂಕಣಧಾರೆಗೆ ಅರಿಷಿಣವೆಲ್ಲೆಂದಾರೆ

ಹೂವಿನ ತೋಟದಲಿ ಹುಟ್ಟಿತ್ತೊಂದರಿಷಿಣ

ಹುಟ್ಟಿತ್ತಲ್ಲೆದು ಕವಲೊಡೆದು ಅರಿಷಿಣವ

ಚಿನ್ನದ ಗುದ್ದಲೀಲಿ ಹಗೆತಂದು ಅರಿಷಿಣವ

ಚೆನ್ನೆರ್ಬೋಗಿ ತೊಳೆತಂದು ಅರಿಷಿಣವ

ಕೊಪ್ಪರಿಕೆಯೊಳಗೆ ಹದಮಾಡಿ ಅರಿಷಿನವ

ಉಪ್ಪರಿಗೆ ಮ್ಯಾಲೆ ಹರಡಿ ಅರಿಷಿಣವ

ಜಂಬುಗೋಣಿಗೆ ತುಂಬಿ ಅರಿಷಿಣವ

ಬೆಳ್ಳಿದಾರದಲಿ ಹೊಲಿದು ಅರಿಷಿಣವ

ಬೆಳ್ಳೋರಿಮ್ಯಾಲೆ ಹೇರಿ ಅರಿಷಿಣವ

ದಂಡಿನದಾರೀಲಿ ಹೊಡೆವಾಗ ಅರಿಷಿಣವ

ದುಂಡಿರಿಬ್ಬರು ಬೆಲೆಮಾಡಿ ಅರಿಷಿಣವ

ಶರಣ ಕೆಂಪಣ್ಣನ ಕಂಕಣಕ್ಕೆಂದು ಅರಿಷಿಣವ ||ಸಿದ್ದಯ್ಯ ಸ್ವಾಮಿ ಬನ್ನಿ||

ಐದು ಕೊಂಬಿನ ಅರಿಷಿಣವನ್ನವರು ಆರು ವರಹಕ್ಕಾದರು ಒಪ್ಪಿಕೊಂಡು, ಪಟ್ಟೆವಸ್ತ್ರವನೆ ಹಾಸುಬುಟ್ಟು ಚೌಕದ ಗಂಟಲಿ ಕಟ್ಕಂಡು, ನಂದಿ ಮ್ಯಾಲೇರಿಕೊಂಡು ಅವರು ಬಂದರಲ್ಲ. ಬೊಪ್ಪೂಪುರಕೆ ತಂದಂತ ಅರಿಷಿಣವ ಗುರುಸ್ವಾಮಿ ಹತ್ತು ಬೆರಳುಗಳಲ್ಲಿ ಎತ್ತಿಗಂಡು ನೆತ್ತಿ ನಯನಾಕೆ ಒತ್ತಿಕಂಡು ಅವರು

ಗುರುಗಳನ್ನೆಲ್ಲಾ ಕರೀತಾರೆ

ಉರುಗುದಾರವನ್ನು ಕೇಳಿದ್ದಾರೆ

ಭೂಮೀಲಿ ಹುಟ್ಟಾದು
ಮೇಘದಲ್ಲಿ ಬೆಳೆಯೋದು
ಈಶಾನ್ಯಕ್ಕೆದುರಾಗಿ ಇಳಿಯುವಂತ
ಈಳ್ಯದೆಲೆಯ ಗುರುಸ್ವಾಮಿ
ಕೈನೀಡಿ ಮಡಿಸಿ ಎಲೆಗೆ ಕಪ್ಪಿಕ್ಕುತಾರೆ
ಕಂಚು ಕಲಕಿ ಬೆರಳಲ್ಲಿ ರಂಜೀಸಿ
ಪಂಚಮುಖದ ಚಿನ್ನದ ಕಳಸಾವ
ಗೋಪಿಸ್ತ್ರೀಯರು ಬೆರಳಲ್ಲೆತ್ತಿಕಂಡು
ಮುತ್ತಿನಸೆಮಣೆಮ್ಯಾಲೆ ಮಡಗುತಾರೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಹಾಲಳ್ಳದ ನೀರು ಹರಿದು, ಬರುವ ಪನ್ನೀರ ತಂದರು ಗುರುಸ್ವಾಮಿ, ಕಳಸಕ್ಕೆ ಸಣ್ಣಗಿಡುವಿಗೆ ಗಿಣ್ಣೆದು ಎಸಳ್ಳೆದು ಬಿಣ್ಣಿಸಿನೆಗೆವ ದುಂಡುಮಲ್ಲಿಗೆಯ ತಂದರಲ್ಲ ಹಸೆಯ ಕಳಸಕ್ಕೆ.

ಎರಡೆಳೆ ಮೂರೆಳೆ ಕೂಡಿದರಷಿಣದೆಳೆ
ನೀರಲ್ಲುಟ್ಟಿ ಕೆಂಡದಲ್ಲಿ ಕನಿಯಾದು
ಅದು ಕೈಸೋಕಿದರೆ ಕಪ್ಪು ಬರುವುದು
ಕಾಡಲ್ಲುಟ್ಟಿದ ಗಂಧ ಕೈಯಲ್ಲಿ ರಂಜೀಸಿ
ಅಟ್ಟಿ ಅರಿಷಿಣ ಕುಟ್ಟಿದ ಕುಂಕೂಮ
ಸಣ್ಣಕ್ಕಿಯಲ್ಲಿ ಅಕ್ಷತೆ ಮಾಡುತಾರೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಹಿತ್ತಲಲ್ಲಿ ಬೆಳೆಯೋದು ಹತ್ತಳ್ಳು, ಹೊಲದಲ್ಲಿ ಬೆಳೆಯೋದು ರಾಜಾಣ. ಬಯಲಲ್ಲಿ ಬೆಳೆಯೋ ನವಧಾನ್ಯಗಳ ತಂದರು. ಗುರುಸ್ವಾಮಿ ಕಳಸಕ್ಕೆ ಮಣೆಯ ಪೂಜೆಗೆ ಮುನ್ನ ರಾಯರು ಮಾರುದ್ದ ರುದ್ರಾಕ್ಷಿಯ ಜಪಿಸುತ ಈಳ್ಯದೆಲೆಯ ಹಿಡ್ಕಂಡು ಗುರುಸ್ವಾಮಿ ಕಪ್ಪೆದು ಅಕ್ಷತೆಗಳ ಇಟ್ಟರಲ್ಲ. ಎಲೆಮಡಚಿ ಕೈಯೊಳಗಿಡುಕೊಂಡು ಕಂಕಣಧಾರಣೆಗೆ ಶರಣನ ಕರೆದಾರು

ಎಡಗಾವಿ ಎತ್ತಿ ಎಡಕ್ಕೆ ಮುಸುಕ್ಕಿಟ್ಟು
ಬಲಗಾವಿ ಎತ್ತಿ ಬಲಕ್ಕೆ ಮುಸುಕ್ಕಿಟ್ಟು
ಹುಲಿಯ ಚರ್ಮವನ್ನೆ ಉಡಿಸಿದರಂತೆ
ಹುಲ್ಲೆಯ ಚರ್ಮವನ್ನೆ ಹೊದಿಸಿದರಂತೆ ||ಸಿದ್ದಯ್ಯ ಸ್ವಾಮಿ ಬನ್ನಿ||

ಯೆಣಶೂರ ರಣಶೂರ ಕಂಡಾಯ ತೆಗೆದು ಹೆಗಲಮ್ಯಾಲೆ ಮಡಗಿದರಂತೆ. ಮಟ್ಟೆಕಪ್ಪೆಕ್ಕೆ ನೀಲಿನಾಮ ತೆಗೆದು, ನವಿಲುಗರಿಗೊಂತೆ ಬೆನ್ನಿಂದೆ ಇಟ್ಟು, ಹಕ್ಕಿಗೂಡನ್ನೇ ಹತ್ತಿರದಲ್ಲಿಟ್ಟರಂತೆ.